

# ಚಂದಮಾಮ

ಸೆಪ್ಟೆಂಬರ್ 1979



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೨೫

ವಾರ್ಷಿಕ ಚಂದಾ ರೂ. ೧೫.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಬಾಲ್ಯದಲ್ಲಿ ಓಡಿಯಾಡಿನಲಿಯುವ ಹಾಗೆ, ಬಾಲ್ಯದಲ್ಲಿರುವ ಉತ್ಸಾಹ, ಚುರುಕುತನಗಳ ಹಾಗೆ ಬೆಳೆದ ಮೇಲೆ ಸಾಧ್ಯವಾಗುವುದಿಲ್ಲ. ಬೆಳವಣಿಗೆಯ ಸಾಫಲ್ಯತೆಗೆ ಬಾಲ್ಯವೇ ಮೂಲವೆಂಬುದನ್ನು ಸಾಂಕೇತಿಕವಾದ ಕುಮಾರಸ್ವಾಮಿಯ ಜನ್ಮ ಕಥೆಯಿಂದ ತಿಳಿಯಬಹುದು. ಆದುದರಿಂದಲೇ ಬಾಲಕೃಷ್ಣ, ಕುಮಾರಸ್ವಾಮಿಯರು ಎಲ್ಲೆಲ್ಲಿಯೂ ಪೂಜೆ ಗೊಳ್ಳುತ್ತಿದ್ದಾರೆ. ಈ ಸಂಚಿಕೆಯಲ್ಲಿ ಅದ್ಭುತ ಬಾಲ ಕುಮಾರಸ್ವಾಮಿಯ ಕಥೆ ಓದುವಿರಿ.

## ಅಮರವಾಣಿ

**ವಿಪತ್ತಿಃ ಕಾಲಸಂಜಾತಾ ದುರ್ವಾರಾ ಜನ ಕೇನ ಚಿತ್**
**ಸಾಯಂ ಪದ್ಮವನೇ ಜಾತಾ ಹಾನಿಃ ಕೇನ ನಿವಾರ್ಯತೇ**

ಕಾಲಾನುಗುಣವಾಗಿ ಬರುವ ಆಪತ್ತುಗಳನ್ನು ಯಾರೂ ತಪ್ಪಿಸಲಾರರು. ಸಾಯಂಕಾಲದಲ್ಲಿ ಪದ್ಮಗಳು ಮುಚ್ಚಿ ಹೋಗದಂತೆ ತಡೆಯಲು ಯಾರಿಂದಾದೀತು ?

---

ಸಂಪುಟ : ೬೩ ಸೆಪ್ಟೆಂಬರ್ '೭೯ ಸಂಚಿಕೆ : ೩

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦

CHITRA




**ಬಿ. ವೆಂಕಟೇಶ್ವರರಾವ್, ನಾಯುಡುಪೇಟೆ, (ಆಂಧ್ರ)**

ಪ್ರ: ಹುಟ್ಟು ಕುರುಡನಿಗೆ ಜೀವನವೇ ಕತ್ತಲೆಯಾಗಿರುವುದಷ್ಟೆ? ಹಾಗಾದರೆ ಅವನಿಗೆ ಸ್ವಪ್ನ ಬೀಳುತ್ತದೆಯೇ? ಸ್ವಪ್ನದಲ್ಲಾದರೂ ಪ್ರಕೃತಿ ಸೌಂದರ್ಯವನ್ನು ನೋಡುವ ಅವಕಾಶ ಅವನಿಗಿದೆಯೆ? ಇದ್ದರೆ ಅದು ಹೇಗೆ?

ಉ: ಹುಟ್ಟು ಕುರುಡನಿಗೆ ಸಹಾ ಸ್ವಪ್ನಗಳು ಬರುತ್ತವೆ. ಅವರ ಸ್ವಪ್ನಗಳು ಕಣ್ಣಿಗೆ ಕಾಣುವ ದೃಶ್ಯಗಳಾಗಿರುವುದಿಲ್ಲ. ಧ್ವನಿ, ರುಚಿ, ಸ್ಪರ್ಶ ಮೊದಲಾದ ದೃಷ್ಟ್ಯೇತರ ಇಂದ್ರಿಯಾನುಭೂತಿಗಳಿಂದ ಕೂಡಿದ ಸ್ವಪ್ನಗಳು ಅವರಿಗೆ ಬರುತ್ತವೆ. ಸ್ವಪ್ನದಲ್ಲಿ ಪ್ರಕೃತಿ ಸೌಂದರ್ಯವನ್ನು ನೋಡುವ ಅವಕಾಶ ಹುಟ್ಟು ಕುರಡನಿಗೆ ಇರಬಹುದೆಂದು ಹೇಳಲು ಸಾಧ್ಯವಿಲ್ಲ. ಹುಟ್ಟು ಕುರುಡರು ಕನಸಿನಲ್ಲಿ ನೋಡಿದಂತೆ ಹೇಳುವ ಮಾತು ಅಪೂರ್ವವೇ. ಒಂದು ವೇಳೆ ಹೇಳಿದರೂ ಅವರ ದೃಷ್ಟಿ ಭಾವವನ್ನು ದೃಷ್ಟಿಯುಳ್ಳವರ ಭಾವನೆಗೆ ಹೋಲಿಸುವಂತಿಲ್ಲ.

ಸಾಧಾರಣವಾಗಿ ಸ್ವಪ್ನ ಬೀಳುವಾಗ ದೃಷ್ಟಿ ಸರಿಯಾಗಿರುವವರ ಕಣ್ಣು ವೇಗವಾಗಿ ಕದಲುತ್ತದೆ. (Spasmodie, Conjugaterapid eye movements) ಅಂತಹ ಚಲನೆಯನ್ನು ಕೆಲಮಂದಿ ಹುಟ್ಟು ಕುರುಡರಲ್ಲಿ ಕೂಡಾ ಗಮನಿಸಲ್ಪಟ್ಟಿವೆ. ಆದರೆ ದೃಷ್ಟಿ ಸರಿಯಾಗಿರುವವರ ಕಣ್ಣಿನ ಚಲನೆಗೂ, ಹುಟ್ಟು ಕುರುಡರ ಕಣ್ಣಿನ ಚಲನೆಗೂ ಬಹಳ ವ್ಯತ್ಯಾಸವಿದೆ. "ಎಲೆಕ್ಟ್ರೋ ಆಕ್ಯುಲೋಗ್ರಾಮ್" (Electro oculogram) ಎಂಬ ಯಂತ್ರದಿಂದ ರಿಕಾರ್ಡು ಮಾಡಲ್ಪಡುವ "ಕಾರ್ನಿಯೋ ಫಂಡಲ್ ಪೊಟೆನ್ಷಿಯಲ್ಸ್" (Corneo fundal potensials) ಎಂಬವು ಹುಟ್ಟು ಕುರುಡರಲ್ಲಿ ಬಹಳವಾಗಿ ಇರುವುದಿಲ್ಲ. ಇದ್ದರೂ ಬಹಳ ಕಡಿಮೆಯಾಗಿರುವುದೇ ಕಾಣುತ್ತದೆ. ಹುಟ್ಟು ಕುರುಡರಲ್ಲಿ ದೃಷ್ಟಿಗೆ ಸಂಬಂಧಿಸಿದ ಯಾವ ಭಾಗಗಳು ಹತಗೊಂಡಿವೆ ಎಂಬುದಕ್ಕೂ, ಕಣ್ಣಿನ ಚಲನೆಗೂ ಸಹ ಬಹಳ ಸಂಬಂಧವಿದೆ. ಸ್ವಲ್ಪ ಕಾಲ ದೃಷ್ಟಿ ಸರಿಯಾಗಿದ್ದು ಕುರುಡುತನ ಬಂದವರ ಸ್ವಪ್ನಗಳಲ್ಲಿ ದೃಶ್ಯಗಳಿರುತ್ತವೆ. ವಯಸ್ಸಾಗಿ ವೃದ್ಧಾಪ್ಯಕ್ಕೆ ಕಾಲಿಟ್ಟವರ ಕೆಲವರ ಸ್ವಪ್ನಗಳಲ್ಲಿ ದೃಶ್ಯಗಳು ಬಹಳವಾಗಿ ತಗ್ಗಿ ಹೋಗುತ್ತವೆ. ಕಣ್ಣಿನ ಚಲನೆಗೂ ಸ್ವಪ್ನ ನೋಡುವುದಕ್ಕೂ ಸ್ವಲ್ಪ ಮಟ್ಟಿಗೆ ಸಂಬಂಧವಿದೆಯೆಂದೇ ಹೇಳಬಹುದು.

ಒಟ್ಟಿನ ಮೇಲೆ ಹುಟ್ಟುಗುರುಡನಿಗೆ ಸಹಾ ಸ್ವಪ್ನಗಳು ಬರುತ್ತವೆ. ಅದು ಅವನ ಭಾವಾನುಭವಕ್ಕೆ ಸಂಬಂಧಿಸಿದಂಥವೇ ಇರುತ್ತದಲ್ಲದೆ, ಸರಿಯಾದ ದೃಷ್ಟಿಯುಳ್ಳವರಿಗೆ ಬೀಳುವ ಸ್ವಪ್ನ ದೃಶ್ಯದಂತೆ ಇರಲಾರದು. ಪ್ರಕೃತಿ ಸೌಂದರ್ಯವನ್ನು ಅವನು ಸ್ವಪ್ನದಲ್ಲಿಯಾದರೂ ನೋಡಲು ಸಾಧ್ಯವಿಲ್ಲವೆಂದೇ ಹೇಳಬೇಕು.

(ಚಂದಮಾಮನ ಓದುಗರಿಗೆ ಈ ಉತ್ತರವನ್ನು ತಲಪಿಸಿದವರು ಶ್ರೀ ಪಿ. ವಿ. ಕೃಷ್ಣರಾವ್, ಲೆಕ್ಚರರ್, ಸೈಕಾಲಜೀ ಅಂಡ್ ಪಾರಾ ಸೈಕಾಲಜೀ ಶಾಖೆ, ಆಂಧ್ರಾ ಯೂನಿವರ್ಸಿಟಿ, ವಾಲ್ತೇರು)



೨೪

"ಮಿತ್ರನೇ, ಹೀಗೆ ಚಕ್ರ ಹೊತ್ತು ನಿಂತುಕೊಂಡಿದ್ದರೆ ಹಸಿವೆಯೂ ದಾಹವೂ ಎದ್ದು ಶಕ್ತಿ ಕುಂದಿ ಬೀಳುವು ದಿಲ್ಲವೇ? ಕೆಲವೇ ದಿನಗಳಲ್ಲಿ ಪ್ರಾಣವೇ ಹೋಗುವು ದಿಲ್ಲವೇ?" ಎಂದು ಅತ್ಯಂತ ಲೋಭಿ ಆ ಮನುಷ್ಯ ನನ್ನು ನೋಡಿ ಕೇಳಿದನು.

"ಹಾಗೇನೂ ಆಗದು. ದುರಾಶೆಯಿಂದ ಪೀಡಿತ ರಾಗಿ ಬಂದವರು ನಿಧಿಗಳನ್ನು ಕೊಳ್ಳೆ ಹೊಡೆದು ಕೊಂಡು ಹೋಗದಂತೆ ಹೆದರಿಸಲಿಕ್ಕಾಗಿಯೇ ಕುಬೇರನು ಈ ಏರ್ಪಾಡು ಮಾಡಿದ್ದಾನೆ. ಚಕ್ರವು ನೆತ್ತಿಯಲ್ಲಿ ತಿರುಗುವಷ್ಟು ಕಾಲವೂ ಹಸಿವೆ ನೀರಡಿಕೆ ಗಳೂ, ಜರಾಮರಣವೂ ಬಾರವು. ಆದರೆ ತಾಳಲ ಸಾಧ್ಯವಾದ ಸಂಕಟ ಮಾತ್ರ ಇದ್ದೇ ಇರುತ್ತದೆ. ಆಶೆ ಪಟ್ಟದ್ದಕ್ಕೆ ಅನುಭವಿಸ ಬೇಕಲ್ಲ? ಇನ್ನು ಅಪ್ಪಣೆಯಪ್ಪ ಹೋಗುತ್ತೇನೆ" ಎಂದನು ಆ ಮನುಷ್ಯ.

"ಎಲ್ಲಿಗೆ ಹೋಗುವಿಯಪ್ಪ? ಇಷ್ಟು ಕಾಲ ಕಳೆದ ಮೇಲೆ ನಿನಗೆ ಮನೆಯೆಲ್ಲಿದೆ? ನಿನ್ನ ಕಡೆಯವ ರೆಲ್ಲಾ ಎಂದೋ ತೀರಿಹೋಗಿದ್ದಾರೆ. ಎಲ್ಲಿಗೆಂದು ಹೋಗುವಿ?" ಎಂದು ಅತ್ಯಂತ ಲೋಭಿ ಕೇಳಿದನು.

"ನಾನು ಅದನ್ನೆಲ್ಲ ಆಲೋಚಿಸಲಿಲ್ಲ ಗೊತ್ತೇ? ಪ್ರಪಂಚವು ವಿಶಾಲವಾಗಿದೆ, ಜೀವಿತವು ಮಧುರ ವಾಗಿದೆ. ಯುಗಗಳೇ ಮಾರ್ಪಟ್ಟರೂ, ಬೇಕಾ ದವರೆಲ್ಲ ಹೊರಟುಹೋದರೂ ಸಹಜೀವನ ವನ್ನು ಪ್ರಾರಂಭಿಸಬಹುದು ಬಿಡು. ನನ್ನ ಚಿಂತೆ ನಿನಗೇಕೆ? ನಿನ್ನ ವಿಷಯ ಆಲೋಚಿಸಿ ಕೊಂಡಿರು." ಎಂದು ನುಡಿದು ಆ ಮನುಷ್ಯನು ಹೊರಟುಹೋದನು.

ಇಷ್ಟರಲ್ಲಿ ಅತಿಲೋಭಿ ಬಂಗಾರದ ನಿಧಿಯ ಹತ್ತಿರ, ಅತ್ಯಂತ ಲೋಭಿಯ ಬರುವಿಕೆಯನ್ನು ಕಾಯುತ್ತ ತುಂಬಾ ಕಾಲ ಕಳೆದ ಮೇಲೆ, ಅವನು ಬಾರದಿರುವುದನ್ನು ನೋಡಿ, ಬಂಗಾರದ ನಿಧಿಯಿಂದ ಐದು ಸಾವಿರ ನಾಣ್ಯಗಳನ್ನು ತೆಗೆದುಕೊಂಡು ಅತ್ಯಂತ ಲೋಭಿಯನ್ನು ಹುಡುಕುತ್ತ ಹೊರಟನು. ಕಟ್ಟಕಡೆಗೆ ಅವನು ಕಣಿವೆಗಿಳಿದು ನಡುನೆತ್ತಿಯ ಮೇಲೆ ತಿರುಗುವ ಚಕ್ರವನ್ನು ಹೊತ್ತುಕೊಂಡು ನಿಂತಿರುವ ತನ್ನ ಮಿತ್ರನನ್ನು ನೋಡಿ ಆಶ್ಚರ್ಯದಿಂದ ಸ್ತಬ್ಧನಾದನು. ಅತ್ಯಂತ ಲೋಭಿಯ ಶರೀರದ



ಮೇಲೆಯೂ ಮುಖದ ಮೇಲೆಯೂ ಭಯಂಕರವಾಗಿ ರಕ್ತ ಹರಿಯುತ್ತಿದ್ದಿತು. ಅಯ್ಯೋ ಪಾಪವೇ!

ಇಂತಹ ಘೋರ ಪರಿಸ್ಥಿತಿಯಲ್ಲಿರುವ ತನ್ನ ಮಿತ್ರನನ್ನು ನೋಡಿ ಅತಿಲೋಭಿಯ ಕಣ್ಣುಗಳಿಂದ ನೀರು ಸುರಿಯಿತು. "ಮಿತ್ರಾ, ಇದೇನು ನಿನ್ನ ಗತಿ ಹೀಗಾಯಿತಲ್ಲಾ?" ಎಂದು ಕೇಳಿದನು. "ಹಣೇ ಬರೆಹ!" ಎಂದ ಅತ್ಯಂತಲೋಭಿ. "ಹೇಗಾಯಿತು ಇದು ?" ಎಂದು ಅತಿಲೋಭಿ ಕೇಳಲು, ಅತ್ಯಂತ ಲೋಭಿ ತಾನು ಅತ್ಯಾಶೆಗೆಬಿದ್ದು ಅಲ್ಲಿಯವರೆಗೆ ಬಂದ ತನ್ನ ಎಲ್ಲಾ ಸಮಾಚಾರವನ್ನೂ ಹೇಳಿದನು.

ಅದನ್ನೆಲ್ಲಾ ಕೇಳಿ ಅತಿಲೋಭಿ, "ಮಿತ್ರಾ, ದುರಾಶೆಗೆ ಹೋದುದರಿಂದಲೇ ನಿನಗೆ ಇಂತಹ ದುರ್ಗತಿ ಬಂದಿತು. ಹಿಂದೆ ಮಂಥರಕನೆಂಬ ಜಾಡರವನು ಕ್ಷೌರಿಕನು ಹೇಳಿದ ಒಳ್ಳೆಯ ಮಾತುಗಳನ್ನು ಅಲ್ಲಗಳೆದ ಹಾಗೆಯೇ ನೀನು ಕೂಡಾ ನನ್ನ ಹಿತ ವಚನಗಳನ್ನು ಕೇಳದೆ ಈ ಗತಿಯನ್ನು ತಂದುಕೊಂಡೆ! ಅದನ್ನು ತಿಳಿಯದೆ ಈಗಲೂ ಸುಮ್ಮನೆ ಹಣೆಬರೆಹ ವೆಂದರಾಯಿತೇ?" ಎಂದನು.

"ಅದೇನು ಜಾಡರವನ ಕಥೆ?" ಎಂದು ಅತ್ಯಂತ ಲೋಭಿ ಕೇಳಲು, ಅತಿಲೋಭಿ ಆ ಕಥೆಯನ್ನು ವಿವರಿಸಿ ಹೇಳಿದನು :

**ಮಂಥರಕನ ಕಥೆ**

ಒಂದಾನೊಂದು ಗ್ರಾಮದಲ್ಲಿ ಮಂಥರಕನೆಂಬ ಜಾಡರವನಿದ್ದನು. ಒಂದು ದಿನ ಅವನ ಮಗ್ಗದ ಮರದ ಕೋಲು ಮುರಿದುಹೋಯಿತು. ಅದನ್ನು ದುರಸ್ತಿಮಾಡಲು ಮರದ ಕೋಲನ್ನು ತರಲು ಕೊಡಲಿ ತೆಗೆದುಕೊಂಡು ಮಂಥರಕನು ಮನೆಯಿಂದ ಹೊರಟನು.

ಹೋಗಿ ಹೋಗಿ ಸಮುದ್ರ ತೀರದಲ್ಲಿದ್ದ ದೊಡ್ಡ ದೊಂದು ಮರವನ್ನು ನೋಡಿದನು. ಆ ಮರವನ್ನು ಕಡಿದರೆ ಎಷ್ಟು ಮಗ್ಗದ ಕೋಲುಗಳನ್ನಾದರೂ ಮಾಡಿಕೊಳ್ಳಬಹುದೆಂದು ಅವನಿಗೆ ತೋರಿತು.

ಅವನು ಮರವನ್ನು ಕಡಿಯಲು ನೋಡುವಾಗ ಆ ಮರದಲ್ಲಿ ವಾಸವಾಗಿರುವ ದೇವತೆ ಅವನೊಂದಿಗೆ, "ಅಪ್ಪಾ, ಈ ಮರದ ತಂಟೆಗೆ ಬರಬೇಡಪ್ಪ. ಇದು ನನ್ನ ವಾಸ ಸ್ಥಳ. ಸಮುದ್ರದ ಗಾಳಿ ಹೀರುತ್ತ, ನಾನು ಶಾಂತಿಯಿಂದ ಇಲ್ಲಿರುತ್ತೇನೆ. ನನಗೆ ಕಷ್ಟ ಕೊಡ ಬೇಡಪ್ಪ." ಎಂದಳು.

"ನಾನು ಮಾತ್ರ ಏನು ಮಾಡಲಿ? ನಿನ್ನ ಕಷ್ಟ ನೋಡುತ್ತಾ ಇದ್ದರೆ ನನ್ನ ಕಷ್ಟ ನೋಡುವವರಾರು? ನನ್ನ ಮಗ್ಗವನ್ನು ಸರಿಮಾಡದಿದ್ದರೆ ನನಗೆ ಹೊಟ್ಟೆ ತುಂಬದಲ್ಲಾ?" ಎಂದ ಮಂಥರಕ.

"ಹಾಗಾದರೆ ಒಂದು ಮಾಡೋಣ. ನೀನು ಈ ಮರದ ಗೊಡವೆಗೆ ಬಾರದೇ ಹೋದರೆ, ನೀನು ಏನು ಕೇಳುವಿಯೋ ಅದನ್ನು ನಾನು ಕೊಡುತ್ತೇನೆ. ಕೇಳು" ಎಂದಳು ವೃಕ್ಷ ದೇವತೆ. "ಹಾಗಾದರೆ ಸರಿ, ನಾನು ಮನೆಗೆ ಹೋಗಿ ನಿನ್ನ ಹತ್ತಿರ ಏನು ಕೇಳಬೇಕೆಂದು

ನನ್ನ ಹೆಂಡತಿಯನ್ನೂ, ಮಿತ್ರನನ್ನೂ ಕೇಳಿ ಬರುತ್ತೇನೆ." ಎಂದು ಹೇಳಿ ಛಾಡರವನು ಗ್ರಾಮಕ್ಕೆ ಹಿಂದಿರುಗಿ, ತನ್ನ ಮಿತ್ರನಾದ ಕ್ಷೌರಿಕನನ್ನು ನೋಡಿ, ಅವನ ಆಲೋಚನೆಯನ್ನು ಕೇಳಿದನು.

"ಆಳಿಕೊಂಡಿರಲಿಕ್ಕೆ ಒಂದು ರಾಜ್ಯವನ್ನೇ ಕೇಳು. ಅದೇ ಒಳ್ಳೆಯದು. ಅದರಿಂದ ಬೇಕಾದುದನ್ನೆಲ್ಲಾ ಪಡೆದು ಅನುಭವಿಸಬಹುದು. ಹೆಸರೂ ಬರುತ್ತದೆ. ನಾನು ನಿನಗೆ ಮಂತ್ರಿಯಾಗಿರುತ್ತೇನೆ, ಇಬ್ಬರೂ ನಿಶ್ಚಿಂತೆಯಿಂದ ಸುಖವಾಗಿರಬಹುದು" ಎಂದನು ಕ್ಷೌರಿಕ ಉತ್ಸಾಹದಿಂದ.

"ನನ್ನ ಹೆಂಡತಿ ಏನು ಹೇಳುತ್ತಾಳೋ ಕೇಳಿ ನೋಡುತ್ತೇನೆ" ಎಂದನು ಮಂಥರಕ.

"ಬೇಡ ಬೇಡ. ಹೆಂಡತಿಯ ಹತ್ತಿರ ಆಲೋಚನೆ ಮಾತ್ರ ಕೇಳಬೇಡ. ಹೆಂಡತಿಗೆ ನಿನಗೆ ತೋರಿದ ಹಾಗೆ ತಿಂಡಿ ಕೊಡು. ನಗಗಳನ್ನೂ, ಬಟ್ಟೆ ಬರೆಗಳನ್ನೂ ಕೊಡು, ಆಲೋಚನೆ ಮಾತ್ರ ಕೇಳಲಿಕ್ಕೆ ಹೋಗಬೇಡ" ಎಂದನು ಕ್ಷೌರಿಕ.

"ಹಾಗಲ್ಲಯ್ಯ! ಮನೆಯಲ್ಲಿ ಹೆಂಡತಿಯೇ ಮುಖ್ಯ. ಅವಳನ್ನು ಕೂಡಾ ಕೇಳಲೇ ಬೇಕು." ಎಂದು ಚಾಡರವನು ಮನೆಗೆ ಬಂದು ತನ್ನ ಹೆಂಡತಿಯೊಂದಿಗೆ ವೃಕ್ಷ ದೇವತೆಯ ಸಂಗತಿ ಹೇಳಿ, ಅವಳ ಆಲೋಚನೆಯನ್ನು ಕೇಳಿದನು. ಕ್ಷೌರಿಕನು ಹೇಳಿದ ಸಲಹೆಯನ್ನೂ ಅವಳೊಂದಿಗೆ ಹೇಳಿದನು.

"ಕ್ಷೌರಿಕನಿಗೇನು ಗೊತ್ತಿದೆ? ಅವನ ಮಾತು ಕೇಳಲೇ ಬಾರದು. ಕ್ಷೌರಮಾಡುವುದರ ಹೊರತು ಅವನಿಗೇನು ಗೊತ್ತಿದೆ? ರಾಜರೆಂದರೆ ಏನು, ರಾಜ್ಯಗಳೆಂದರೆ ಹೇಗೆ ಎಂಬುದೆಲ್ಲಾ ಅವನಿಗೇನು ಗೊತ್ತಿರುತ್ತೆ? ರಾಜ್ಯವಾಳುವುದೆಂದರೆ ಬರಿಮಾತಲ್ಲ. ಯುದ್ಧ, ಸಂಧಿ, ರಾಯಭಾರ, ಇನ್ನೂ ಏನೇನೋ ಬಂದು ಬೀಳುತ್ತ ನಾನಾ ಕಷ್ಟಗಳು ಬರುತ್ತವೆ, ರಾಜ್ಯಕ್ಕಾಗಿ ರಾಜನ ಪ್ರಾಣಕ್ಕೆ ಅವನ ಮಗಂದಿರೋ ತಮ್ಮಂದಿರೋ ಸಂಚಕಾರ ತಂದು ಬಿಡುತ್ತಾರೆ! ದೂರದಲ್ಲಿ ನೋಡಲಿಕ್ಕೆ ಮಾತ್ರ ರಾಜಪದವಿ ಚೆಂದ. ಅನುಭವಿಸಲಿಕ್ಕಲ್ಲ. ಅಯ್ಯೋ! ರಾಜಪದವಿ ನೆನೆದರೇ



ಭಯವಾಗುತ್ತೆ! ನಮಗಂತೂ ಎಷ್ಟು ಮಾತ್ರಕ್ಕೂ ಬೇಡದ್ದು." ಎಂದಳು ಜಾಡರವನ ಹೆಂಡತಿ.

"ಹೌದು. ನಿನ್ನ ಮಾತು ನಿಜ, ಹಾಗಾದರೆ ಏನನ್ನು ಕೇಳಲಿ ವೃಕ್ಷ ದೇವತೆಯನ್ನು ?" ಎಂದು ಕೇಳಿದನು ಮಂಥರಕ.

"ನೋಡಿ. ನಿಮಗಿರುವ ಒಂದೇ ತಲೆಯನ್ನೂ, ಎರಡೇ ಕೈಗಳನ್ನೂ ಉಪಯೋಗಿಸಿ ಬಟ್ಟೆ ನೇಯು ವುದರಿಂದ ನಮಗೇನೋ ದಿನ ಹೋಗುತ್ತೆ. ನಿಮಗೆ ಇನ್ನೆರಡು ಕೈಗಳೂ, ಇನ್ನೊಂದು ತಲೆಯೂ ಬೇಕೆಂದು ದೇವತೆಯನ್ನು ಕೇಳಿರಿ. ಅವುಗಳಿಂದ ಒಂದೇ ಸಾರಿ ಎರಡು ಬಟ್ಟೆಗಳನ್ನು ನೇಯಬಹುದು. ಒಂದು ಬಟ್ಟೆ ದಿನ ಖರ್ಚಿಗಾಯಿತು. ಇನ್ನೊಂದು ಬಟ್ಟೆ ವಿನೋದದ ಖರ್ಚುಗಳಿಗಾಯಿತು. ಇನ್ನೇನಾಗಬೇಕು ನಮಗೆ ?" ಎಂದಳು ಜಾಡರವನ ಹೆಂಡತಿ.

"ಭಲೇ ! ಚೆಲೋ ಆಲೋಚನೆ !" ಎಂದು ಮಂಥರಕನು ಸಮುದ್ರದ ಬದಿಯ ಮರದ ಬಳಿಗೆ ಹೋಗಿ, ಹೆಂಡತಿ ಹೇಳಿದಂತೆಯೇ ವೃಕ್ಷ ದೇವತೆಯನ್ನು ಕೇಳಿದನು. ದೇವತೆ ಅವನು ಕೇಳಿದಂತೆಯೇ ಮಾಡಿದಳು.

ಅಲ್ಲಿಂದ ಅವನು ಎರಡು ತಲೆ ನಾಲ್ಕು ಕೈಗಳೊಂದಿಗೆ ಮನೆಗೆ ಬರುವಾಗ, ಜನರು ಅವನನ್ನು ನೋಡಿ, ಭೂತವೆಂದುಕೊಂಡು ಕೋಲಿನಿಂದಲೂ ಕಲ್ಲುಗಳಿಂದಲೂ ಹೊಡೆದು ಓಡಿಸಿ ಬಿಟ್ಟರು. ಅವನು ಎಲ್ಲಿಯೋ ಬಿದ್ದು ಸತ್ತು ಹೋದನು.

ಅತಿ ಲೋಭಿ ಅತ್ಯಂತ ಲೋಭಿಗೆ ಈ ಕಥೆಯನ್ನು ಹೇಳಿ, ಮತ್ತೆ ಹೀಗೆಂದನು :

"ಬಂಗಾರವು ನಿನಗೆ ತೃಪ್ತಿಕೊಡಲಿಲ್ಲ. ವಜ್ರ ವೈಡೂರ್ಯಗಳೇ ಬೇಕೆಂದು ಇಲ್ಲಿಗೆ ಬಂದಿರುವಿ. ಏನಾಯಿತು ಈಗ ? ಚಕ್ರವು ನಿನ್ನ ತಲೆಯ ಮೇಲೆ ತಿರುಗುತ್ತ ಕೆಂಪಗಿನ ರಕ್ತ ಬಿಂದುಗಳನ್ನು ಸುತ್ತಲೂ ಹಾರಿಸಿಕೊಂಡಿದೆ. ನೀನು ಬಯಸಿದ ವಜ್ರಗಳಿಗಿಂತಲೂ ಹೊಳೆಯುವಂತಹ ಕಣ್ಣೀರ ಬಿಂದುಗಳನ್ನು ನಿನ್ನ ಕಣ್ಣುಗಳು ಉದುರಿಸುತ್ತಿವೆ. ಮಿತ್ರನೇ, ಬಂಗಾರಕ್ಕಿಂತ ರತ್ನಗಳು ಬೆಲೆಯುಳ್ಳವೆಂದು ತಿಳಿದುಕೊಂಡ ಮಾತ್ರಕ್ಕೆ ಅದು ಜ್ಞಾನವೆನಿಸದು. ಬರಲಿರುವ ತೊಂದರೆಗಳನ್ನೂ, ಪರಿಣಾಮದ ಫಲಿತಗಳನ್ನೂ ಮೊದಲೇ ಅರಿತುಕೊಳ್ಳುವ ತಿಳುವಳಿಕೆ ಕೂಡಾ ಇರಬೇಕು. ಹಾಗಿಲ್ಲದಿದ್ದರೆ ಎಂತಹ ಮೇಧಾವಿಯಾದರೂ, ಕುಲೀನನಾದರೂ ಅಪಾಯಕ್ಕೆ ಗುರಿಯಾಗುತ್ತಾನೆ. ಲೋಕಜ್ಞಾನವು ಎಲ್ಲಕ್ಕಿಂತಲೂ ಮುಖ್ಯವಾದುದು. ಅದಿಲ್ಲದಿದ್ದರೆ ಸಿಂಹವನ್ನು ಬದುಕಿಸಿದ ಪಂಡಿತನ ಹಾಗೆ ನಾಶಹೊಂದುವವನು."

"ಅದೆಂತಹ ಕಥೆ ?" ಎಂದು ಅತ್ಯಂತ ಲೋಭಿ ಕೇಳಿದನು. ಅತಿ ಲೋಭಿ ಹೀಗೆಂದನು :





# ದಿವ್ಯಜ್ಞಾನ

ಯಾವ ಸಮಸ್ಯೆಗೂ ಸೋಲದ ಹರಿತ ಬುದ್ಧಿಯು ವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಗೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಲು, ಶವದೊಳಗೆ ಹುದುಗಿದ್ದ ಬೇತಾಳವು ಮಾತಾಡ ಪ್ರಾರಂಭಿಸಿ, "ಎಲೈ ಮಹಾರಾಜನೇ, ಮನುಷ್ಯರು ಎಷ್ಟಾದರೂ ಅಜ್ಞಾನಿಗಳೆಂದೇ ಹೇಳಬೇಕು. ಜ್ಞಾನಿಗಳನ್ನು ಗೌರವಿಸಲೂ ಅವರಿಗೆ ತಿಳಿಯದು. ಇದಕ್ಕೆ ನಿದರ್ಶನವಾಗಿ ದಿವ್ಯ ಜ್ಞಾನಿಯಾದ ಒಬ್ಬನಿಗೆ ನಡೆದ ಅನ್ಯಾಯವನ್ನು ಕುರಿತು ಹೇಳುತ್ತೇನೆ. ದಾರಿಯಶ್ರಮ ಮರೆಯುವಂತೆ ಕಥೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು:

ಹಿಂದೆ ದಿವಾಕರನೆಂಬರಾಜನು ಕಾಂಚನಪುರವನ್ನು ಪರಿಪಾಲಿಸಿಕೊಂಡಿರುವಾಗ, ಆ ನಗರಕ್ಕೆ ಒಬ್ಬ ಸಾಧುವಿನ ಆಗಮನವಾಯಿತು. ಆದರೆ ಅವನು ನಗರದೊಳಗೆ ಬಾರದೆ, ನಗರಕ್ಕೆ ದೂರವಾಗಿದ್ದ ವನದಲ್ಲಿ ಕುಟೀರ ನಿರ್ಮಿಸಿಕೊಂಡು ತಂಗಿದ್ದನು. ಪುರ ಜನರು ಅವನ ಸಂಗತಿಯನ್ನು ಅರಿತು ಅವನ ದರ್ಶನ

## ಬೇತಾಳಕಥೆಗಳು?..



[illegible]ಗ ಅಲ್ಲಿಗೆ ಬರುತ್ತಿದ್ದರು. ಅವನೊಂದಿಗೆ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಿದ್ದರು; ಆಲೋಚನೆ ಕೇಳುತ್ತಿದ್ದರು. ಆ ಸಾಧು ಪ್ರತಿಯೊಬ್ಬರ ಮಾತನ್ನೂ ಆಸ್ಥೆಯಿಂದ ಕೇಳಿ, ಅವರ ಕಷ್ಟಗಳು ಹೇಗೆ, ಯಾವಾಗ ತೊಲಗುತ್ತದೋ ಅಥವಾ ತೊಲಗಲಾರದೋ, ತೊಲಗಬೇಕಾದರೆ ಏನು ಮಾಡಬೇಕೋ, ಏನು ಮಾಡಿದರೂ ತೊಲಗದಿದ್ದರೆ ಅದನ್ನೂ ಹೇಳಿಬಿಡುತ್ತಿದ್ದನು. ಅವನು ಹೇಳಿದ ಮಾತು ಹುಸಿ ಹೋಗದಿದ್ದುದರಿಂದ ಎಲ್ಲರೂ ಅವನನ್ನು ದಿವ್ಯಜ್ಞಾನಿ' ಎನ್ನುತ್ತಿದ್ದರು. ಅವನ ಹೆಸರು ನಗರದೊಳಗೆಲ್ಲಾ ಹರಡಿತ್ತು. ರಾಜನ ಕಿವಿಯವರೆಗೂ ಹೋಯಿತು. ದಿವಾಕರ ರಾಜನಿಗೆ ವಿಧಿಯ ಮೇಲೂ ಹಣೆಬರಹದ ಮೇಲೂ ಪೂರ್ತಿ ವಿಶ್ವಾಸವಿದ್ದುದರಿಂದ, ದಿವ್ಯಜ್ಞಾನದಿಂದ ಏನು ಪ್ರಯೋಜನವೆಂದು ಗೊತ್ತಾಗಲಿಲ್ಲ. ಪ್ರತಿಯೊಬ್ಬರಿಗೂ ಹಣೆಯಲ್ಲಿ ಬರೆದಂತೆ ತಪ್ಪದೆ ನಡೆಯುವಾಗ, ದಿವ್ಯಜ್ಞಾನದಿಂದ ಆಗು ಹೋಗುಗಳನ್ನು ತಿಳಿದು ಏನು ಪ್ರಯೋಜನವಾದೀತು? ವಿಧಿ ನಿಯಮದಂತೆ ಬರುವುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಾಗದು. ಹಾಗಿರುವಾಗ ದಿವ್ಯಜ್ಞಾನಿಯಿಂದ ಮುಂದೆ ಹೀಗೆಯೇ ನಡೆಯುವುದೆಂದು ತಿಳಿಯಬಹುದಾದರೂ ಅದನ್ನು ತಪ್ಪಿಸಲಂತೂ ಸಾಧ್ಯವಿಲ್ಲ.

ತನ್ನ ಆಲೋಚನೆಯನ್ನು ರಾಜನು ಮಂತ್ರಿಯೊಂದಿಗೂ ಹೇಳಿದನು. ಮಂತ್ರಿ ಸುದರ್ಶನನಿಗೆ ಭವಿಷ್ಯವನ್ನು ತಿಳಿದು ಕೊಳ್ಳುವುದರಿಂದ ಲಾಭವಿರಬಹುದೆಂದು ತೋರತೊಡಗಿತು. ಸುದರ್ಶನನ ಮಗನು ಹುಟ್ಟಿದಂದಿನಿಂದಲೂ ರೋಗಿಷ್ಠನಾಗಿರುವವನು. ಅವನನ್ನು ಆರೋಗ್ಯವಂತನನ್ನಾಗಿ ಮಾಡಲು ವೈದ್ಯರಿಗೆ ಸಾಧ್ಯವಾಗಲಿಲ್ಲ. ಈ ದಿವ್ಯಜ್ಞಾನಿಯಿಂದ ಏನಾದರೂ ಸಾಧ್ಯವಾಗಬಹುದೇನೋ ಎಂದು ಮಂತ್ರಿಗೆ ತೋರಿತು. ಅಂತಲೇ ಮಂತ್ರಿ ಸುದರ್ಶನನು ದಿವ್ಯಜ್ಞಾನಿಯ ಬಳಿಗೆ ಹೋಗಿ ತನ್ನ ಮಗನ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ದಿವ್ಯಜ್ಞಾನಿ, "ನಿಮ್ಮ ಮಗನಿಗೆ ಗ್ರಹ ದೋಷ ಬಡಿದಿದೆ. ನಾನು ಹೇಳುವ ವಿಧವಾಗಿ ಶಾಂತಿ ಮಾಡಿಸಿರಿ. ಮಗನ ಆರೋಗ್ಯ ಸರಿಯಾಗುತ್ತದೆ" ಎಂದನು.

ಅವನು ಹೇಳಿದ ಹಾಗೆಯೇ ಸುದರ್ಶನನು ಗ್ರಹಶಾಂತಿ ಮಾಡಿಸಿದನು. ಅನಂತರ ಒಂದು ತಿಂಗಳೊಳಗೆ ಸುದರ್ಶನನ ಮಗನಿಗೆ ಪೂರ್ಣಾರೋಗ್ಯ ಉಂಟಾಯಿತು. ಮಂತ್ರಿ ಹಿಡಿಸಲಾರದಷ್ಟು ಆನಂದದಿಂದ ದಿವ್ಯಜ್ಞಾನಿಗೆ ಅಪಾರವಾಗಿ ಧನಕನಕಾದಿಗಳನ್ನು ಕಾಣಿಕೆ ಕೊಡಲು ಹೋದನು.

"ಎಲ್ಲಾ ಆಶೆಗಳನ್ನೂ ಬಿಟ್ಟವನಾದ ನನಗೆ ಈ ಬಹುಮಾನಗಳನ್ನೇಕೆ ತಂದೆಯಪ್ಪಾ? ನನಗೇನೂ ಬೇಡ." ಎಂದು ದಿವ್ಯಜ್ಞಾನಿ ಅವುಗಳನ್ನು ನಿರಾಕರಿಸುತ್ತ, ಮಂತ್ರಿಗೆ ಒಂದು ಔಷಧವನ್ನು ಕೊಟ್ಟು "ಯಾರಿಗಾದರೂ ನಾಗರಹಾವು ಕಡಿದರೆ ಈ ಔಷಧದಿಂದ ಅವರನ್ನು ಬದುಕಿಸಬಹುದು" ಎಂದನು.



ಯಾರಿಗೆ ಹಾವಿನಿಂದ ಗಂಡಾಂತರವಿದೆಯೋ, ಇದನ್ನು ಈ ದಿವ್ಯಜ್ಞಾನಿ ತನ್ನ ಕೈಗೆ ಏಕೆ ಕೊಡುವನೋ ಎಂದುಕೊಂಡು ಮಂತ್ರಿ ಮನೆಗೆ ಹಿಂದಿರುಗಿದನು. ಮಾರಣೇ ದಿನ ಬೆಳಂಜಾಮದಲ್ಲಿ ಅವನು ಮನೆಯಿಂದ ಹೊರಗೆ ಬರುವಾಗ, ಮಸಕು ಬೆಳಕಿನಲ್ಲಿ ಕಾಣದೆ ನಾಗರಹಾವನ್ನು ತುಳಿದು ಬಿಟ್ಟನು. ಮರುಕ್ಷಣ ಹಾವುಕಡಿದು ಮಾಯವಾಯಿತು. ಆದರೆ ದಿವ್ಯಜ್ಞಾನಿ ಕೊಟ್ಟ ಔಷಧವು ಸುದರ್ಶನನ ಪ್ರಾಣವನ್ನು ಕಾಪಾಡಿತು.

ಈ ಸಂಗತಿಗಳನ್ನೆಲ್ಲ ನೋಡಿದ ಮೇಲೆ ದಿವಾಕರ ರಾಜನಿಗೂ ದಿವ್ಯಜ್ಞಾನಿಯ ಮೇಲೆ ಆಸಕ್ತಿ ಉಂಟಾಯಿತು. ಆ ಜ್ಞಾನಿ ಭವಿಷ್ಯತ್ತನ್ನು ತಿಳಿಯುವುದು ಮಾತ್ರವಲ್ಲದೆ ಬದಲಾಯಿಸಲೂ ಸಮರ್ಥನಿರುವ ಹಾಗಿದೆ. ಈ ಅನುಮಾನವನ್ನು ತೀರಿಸಿಕೊಳ್ಳಲಿಕ್ಕಾಗಿ ದಿವಾಕರ ರಾಜನು ಒಂದುಸಾರಿ ಬೇಟೆಗೆ ಹೋಗುತ್ತ, ದಾರಿಯಲ್ಲಿ ದಿವ್ಯಜ್ಞಾನಿಯ ಕುಟೀರದ ಹತ್ತಿರ ನಿಂತು, "ಸ್ವಾಮಿ, ಬೇಟೆಯಾಡಲು ಹೊರಟಿದ್ದೇನೆ. ಈ ದಿನ ನನ್ನ ಬೇಟೆ ಹೇಗೆ ಸಾಗುತ್ತದೆ?" ಎಂದು ಕೇಳಿದನು.

"ರಾಜಾ, ಈ ದಿನ ನೀನು ಒಂದೇ ಒಂದು ಪ್ರಾಣಿಯನ್ನೂ ಹೊಡೆಯಲಾರೆ" ಎಂದನು ದಿವ್ಯಜ್ಞಾನಿ.

ಬೇಟೆಯಲ್ಲಿ ನಿಷ್ಣಾತನಾದ ರಾಜನಿಗೆ ದಿವ್ಯಜ್ಞಾನಿಯ ಮಾತು ಕೇಳಿ ಆಶ್ಚರ್ಯವಾಯಿತು. ಅದುವರೆಗೆ ಬೇಟೆಗೆ ಹೊರಟ ರಾಜನು ಅನೇಕ ಪ್ರಾಣಿಗಳನ್ನು ಹೊಡೆಯದೆ ಹಿಂದಿರುಗಿದವನೇ ಅಲ್ಲ. "ಬಹುಶಃ ಈ ದಿವ್ಯಜ್ಞಾನಿಗೆ ಅರಣ್ಯದೊಳಗಿನ ಭವಿಷ್ಯ ಸ್ಪಷ್ಟವಾಗಿ ತಿಳಿಯಲಾರದೇನೋ?" ಎಂದುಕೊಂಡು ಅರಣ್ಯಕ್ಕೆ ಹೋದನು. ಆದರೆ ದಿವ್ಯಜ್ಞಾನಿ ಹೇಳಿದುದು ಅಕ್ಷರಶಃ ನಿಜವಾಯಿತು. ಆ ದಿನ ಆ ರಾಜನಿಗೆ ಒಂದು ಸಣ್ಣ ಮೊಲವೂ ಕಾಣಲಿಲ್ಲ.

ಈ ಸಂಗತಿ ನಡೆದ ಕೆಲವೇ ದಿನಗಳಲ್ಲಿ ದಿವಾಕರ ರಾಜನಿಗೆ ನೆರೆ ದೇಶದ ರಾಜನೊಂದಿಗೆ ಯುದ್ಧ ಮಾಡಬೇಕಾಗಿ ಬಂತು. ಶತ್ರು ರಾಜನು ತುಂಬ ಬಲಿಷ್ಠನಾಗಿದ್ದನು. ಈ ಸಂದರ್ಭದಲ್ಲಿ ದಿವ್ಯಜ್ಞಾನಿಯ ಆಲೋಚನೆ ಕೇಳೋಣವೆಂದು ದಿವಾಕರನಿಗೆ ತೋರಿತು. ಅದರಂತೆ ಕೇಳಿದಾಗ ದಿವ್ಯಜ್ಞಾನಿ "ನೀನು ಏನೂ ಹಿಂಜರಿಯದೆ ಯುದ್ಧಮಾಡು. ಸುಲಭದಲ್ಲೇ ನಿನಗೆ ಜಯವಾಗುತ್ತದೆ. ಸಂದೇಹವೇ ಇಲ್ಲ" ಎಂದನು.

ಈಸಾರಿ ಕೂಡಾ ದಿವ್ಯಜ್ಞಾನಿ ಹೇಳಿದ ಜೋಸ್ಯವು ನಿಜವೇ ಆಯಿತು. ತಾನು ತುಂಬಾ ಬಲಿಷ್ಠನೆಂಬ ಅಹಂಕಾರದಿಂದ ಆ ಶತ್ರುರಾಜನು ವ್ಯೂಹ ರಚನೆಯಲ್ಲಿ ಅಶ್ರದ್ಧೆಯಾಗಿದ್ದುದರಿಂದ ಯುದ್ಧ ತೊಡಗಿ ಸ್ವಲ್ಪ ಹೊತ್ತಿನೊಳಗೇ ಭಾರೀ ಪೆಟ್ಟು ತಿಂದು ಆ ಶತ್ರುರಾಜನು ಓಡಿಹೋಗಬೇಕಾಯಿತು.

ಇಷ್ಟಾದ ಮೇಲೆ ದಿವಾಕರ ರಾಜನಿಗೂ ಮಂತ್ರಿ ಸುದರ್ಶನನಿಗೂ ದಿವ್ಯಜ್ಞಾನಿಯನ್ನು ಕುರಿತು ಚರ್ಚೆಯುಂಟಾಯಿತು.



"ಒಂದು ವಿಷಯ ಗೊತ್ತಾಯಿತು. ಈ ದಿವ್ಯ ಜ್ಞಾನಿಗೆ ಎಲ್ಲರ ಭವಿಷ್ಯತ್ತೂ ಗೊತ್ತಾಗುತ್ತದೆ. ಅದನ್ನು ಬದಲಾಯಿಸುವ ಶಕ್ತಿ ಅವನಿಗಿಲ್ಲ. ನಿನ್ನ ಮಗನನ್ನು ಪೂರ್ತಿ ಗುಣಪಡಿಸಿದನೆಂದೂ, ನಿನ್ನನ್ನು ಹಾವಿನ ಗಂಡದಿಂದ ಕಾಪಾಡಿದನೆಂದೂ ನೀನು ಹೇಳಬಹುದು. ಆದರಿಂದ ಅವನಿಗೆ ಭವಿಷ್ಯತ್ತನ್ನು ಬದಲಾಯಿಸಲೂ ಸಾಧ್ಯವಿದೆಯೆಂದು ತೋರ ಬಹುದು. ಆದರೆ ಅನೇಕರಿಗೆ ಅವನು ರೋಗಗಳು ಗುಣವಾಗುವಂತಹುದಲ್ಲವೆಂದೂ, ಅಪಜಯಗಳು ತಪ್ಪದೆಂದೂ ಹೇಳಿರುವನಷ್ಟೆ? ನಿನ್ನ ಮಗನಿಗೆ ರೋಗ ಗುಣವಾಗುವುದೆಂದೂ, ನಿನಗೆ ಹಾವಿನ ಗಂಡದಿಂದ ಪ್ರಾಣ ಹಾನಿ ಇಲ್ಲವೆಂದೂ ಅವನಿಗೆ ಗೊತ್ತಿತ್ತು" ಎಂದನು ರಾಜ.

ರಾಜನ ಮಾತಿಗೆ ಮಂತ್ರಿ ಆಲೋಚನೆಗೆ ಬಿದ್ದು ದಿವ್ಯಜ್ಞಾನಿ ಜನರಿಗೆ ಮಾಡುವ ಒಳಿತನ್ನು ಕುರಿತು, ಅವನ ದಿವ್ಯಜ್ಞಾನದ ಪ್ರಭಾವವು ಪ್ರಜೆಗಳ ಮೇಲೆ ಹೇಗೆ ಪ್ರಭಾವ ಬೀರಿದೆ ಎಂಬುದನ್ನು ಕುರಿತು ಬಹಳ ಶ್ರದ್ಧೆಯಿಂದ ಪರೀಕ್ಷಿಸ ತೊಡಗಿದನು. ಆಗ ರಾಜನು ಹೇಳಿದ ಮಾತೇ ನಿಜವೆನಿಸಿತು. ದಿವ್ಯಜ್ಞಾನಿ ಕೆಲವರಿಗೆ ಕಷ್ಟಗಳು ಹೇಗೆ ಬರುತ್ತವೆಂದು ಹೇಳುವನು. ಮತ್ತೆ ಕೆಲವರಿಗೆ ಅವರ ಪ್ರಯತ್ನ ಫಲಿಸಲಾರದೆಂದು ಹೇಳುವನು. ಇನ್ನೂ ಕೆಲವರಿಗೆ ಬರಲಿರುವ ಒಳಿತನ್ನು ಹೇಳುವನು. ಹೀಗೆ ದಿವ್ಯಜ್ಞಾನಿ ಹೇಳಿದ ಮಾತು ಗಳಿಂದ ತಮ್ಮ ಪ್ರಯತ್ನಗಳು ಫಲಿಸಲಾರವೆಂದು ಮೊದಲೇ ತಿಳಿದುಕೊಂಡವರು ಪ್ರಯತ್ನ ಮಾಡುವು ದನ್ನೇ ಬಿಟ್ಟುಬಿಡುತ್ತಾರೆ. ತಮಗೆ ಒಳಿತಾಗುವುದೆಂದು ತಿಳಿದವರು ನಿಶ್ಚಿಂತೆಯಿಂದ ಕೈಕಟ್ಟಿಕೊಂಡು ಕುಳಿತು ಬಿಡುತ್ತಾರೆ. ಈ ವಿವರಗಳನ್ನು ತಿಳಿದ ಮೇಲೆ ಸುದರ್ಶನ ಮಂತ್ರಿ ಒಂದು ನಿರ್ಣಯಕ್ಕೆ ಬಂದನು. ಒಂದು ದಿನ ರಾತ್ರಿ ಲೋಕವೆಲ್ಲಾ ನಿದ್ದೆಯಲ್ಲಿ ಮುಳುಗಿದ್ದ ಸಮಯದಲ್ಲಿ ಸುದರ್ಶನ ಮಂತ್ರಿ ಇಬ್ಬರು ಅಂತರಂಗಿಕ ರೊಂದಿಗೆ ದಿವ್ಯಜ್ಞಾನಿಯ ಪರ್ಣ ಶಾಲೆಗೆ ಹೋಗಿ ಅವನನ್ನು ನಿದ್ದೆಯಿಂದ ಎಬ್ಬಿಸಿ ರಥದ ಮೇಲೆ ಏರಿ ಕೊಳ್ಳುವಂತೆ ಹೇಳಿದನು. ಆ ರಥದಲ್ಲಿ ಒಬ್ಬ ಅಂತ ರಂಗಿಕನನ್ನು ಜತೆ ಗೂಡಿಸಿ ದೂರ ದೇಶಕ್ಕೆ ಕಳುಹಿಸಿ ಬಿಟ್ಟನು. ಎರಡನೇ ಅಂತರಂಗಿಕನಿಗೆ ದಿವ್ಯಜ್ಞಾನಿಯ ಹಾಗೆ ಗಡ್ಡ ಮೀಸೆ ಜುಟ್ಟುಗಳನ್ನು ಇಡಿಸಿ ದಿವ್ಯ ಜ್ಞಾನಿಯ ವೇಷದಲ್ಲಿ ಪರ್ಣ ಶಾಲೆಯಲ್ಲೇ ಇರಿಸಿ, ಸುದರ್ಶನನು ಹಿಂದಿರುಗಿದನು.

ಮರುದಿನದಿಂದ ದಿವ್ಯಜ್ಞಾನಿ ಹೇಳುವ ಮಾತು ಗಳು ನಿಜವಾಗದೆ ಹೋಗುತ್ತ, ದಿವ್ಯಜ್ಞಾನಿಯ ಶಕ್ತಿ ಹ್ರಾಸವಾಗುತ್ತಾ ಹೋಯಿತೆಂದು ಜನರು ಅಂದು ಕೊಳ್ಳ ತೊಡಗಿದರು. ಅವನೊಬ್ಬ ವೇಷಧಾರಿ ಎಂದು ಯಾರಿಗೂ ಗೊತ್ತಾಗಲಿಲ್ಲ. ಅವನ ಮಹತ್ವ ಕಡಿಮೆ ಯಾಗಿ ಹೋಗಲು, ಜನರು ಬರುವುದೂ ಕಡಿಮೆ ಯಾಯಿತು. ಒಂದು ಒಳ್ಳೆಯ ದಿನ ನೋಡಿ ವೇಷ ಧಾರಿಯಾದ ಮಂತ್ರಿಯ ಅಂತರಂಗಿಕನು ಪರ್ಣಶಾಲೆ

ಯಿಂದ ಹೊರಟು ಮಂತ್ರಿಯ ಬಳಿಗೆ ಬಂದುಬಿಟ್ಟನು. ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸುದರ್ಶನನು ಮಾಡಿದ್ದು ಸರಿಯೇ? ಅವನಿಗೆ ತುಂಬಾ ಒಳಿತನ್ನು ಮಾಡಿ, ಜನರಿಗೂ ಶ್ರಮ ತಗ್ಗಿಸಿ ದುರಾಶೆಗಳಿಂದ ಕಾಪಾಡುತ್ತ ಬಂದ ದಿವ್ಯಜ್ಞಾನಿಯನ್ನು ಅವನೇಕೆ ದೂರ ದೇಶಕ್ಕೆ ಕಳುಹಿಸಿಬಿಟ್ಟನು? ದಿವ್ಯಜ್ಞಾನಿಯಿಂದ ಯಾರಿಗೂ ಯಾವ ನಷ್ಟವೂ ಆಗಲಿಲ್ಲವಲ್ಲಾ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದಿದ್ದರೆ ನಿನ್ನ ತಲೆ ನುಚ್ಚುನೂರಾಗಿ ಹೋಗುತ್ತದೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ದಿವ್ಯಜ್ಞಾನಿ ಭವಿಷ್ಯತ್ತನ್ನು ನಿಜಕ್ಕೂ ಬದಲಾಯಿಸಬಲ್ಲವನಾಗಿದ್ದರೆ ಅವನಿಂದ ಪ್ರಯೋಜನವಿರುವ ಮಾತು ನಿಜವೇ. ಆದರೆ ರಾಜನು ನಿರೂಪಿಸಿದಂತೆ ಅವನಿಗೆ ಭವಿಷ್ಯತ್ತು ಮಾತ್ರ ತಿಳಿಯುತ್ತಿದ್ದರೆ ಆದರಿಂದ ಪ್ರಜೆಗಳಿಗೂ ದೇಶಕ್ಕೂ ಬಹಳ ನಷ್ಟವೇ ಉಂಟಾಗುತ್ತದೆ. ತಮ್ಮ ಭವಿಷ್ಯತ್ತು ಹೀಗೆಯೇ ಎಂದು ತಿಳಿದವರು ಪ್ರಯತ್ನ ಮಾಡುವುದನ್ನು ಬಿಟ್ಟು ಬಿಡುತ್ತಾರೆ. ಮಾನವರು ಮುಂದುವರಿಯಬೇಕಾದರೆ ಪ್ರಯತ್ನಮಾಡಿಕೊಂಡೇ ಇರಬೇಕು. ಜ್ಞಾನವು ಅಭಿವೃದ್ಧಿಯಾಗಲು ವಿಫಲ ಪ್ರಯತ್ನಗಳು ಕೂಡಾ ತುಂಬಾ ಸಹಾಯ ಮಾಡುತ್ತವೆ. ವಿದ್ಯೆಕಲಿಸುವ ಗುರು ತನ್ನ ಶಿಷ್ಯರಿಗೆ ತಪ್ಪು ಮಾಡುವ ಅವಕಾಶಗಳನ್ನೂ ಕೊಟ್ಟು, ಆ ತಪ್ಪುಗಳ ಮೂಲಕ ಜ್ಞಾನವು ಅಭಿವೃದ್ಧಿಯಾಗುವಂತೆ ಮಾಡಬಲ್ಲನು. ಬರಿಯ ಬೋಧನೆಗಳಿಂದ ಜ್ಞಾನವು ಬೆಳೆಯುವುದಿಲ್ಲ. ಬೋಧನೆ ಮಾಡುವುದು ಮಾತ್ರವೇ ಶಿಕ್ಷಣವೆನಿಸಲಾರದು. ಪ್ರಜೆಗಳಾದರೂ ಅಷ್ಟೇ. ತಮ್ಮ ಪ್ರಯತ್ನಗಳು ಫಲಿಸುವುದಿಲ್ಲವೆಂದು ಮುಂದಾಗಿ ತಿಳಿದು ಬಿಟ್ಟರೆ ಪ್ರಯತ್ನವನ್ನೇ ಬಿಟ್ಟು ಸುಮ್ಮನಾಗುವರು. ತಮಗೆ ಒಳಿತೇ ಆಗುತ್ತದೆಂದು ನಂಬುವ ಹಾಗೆ ತಿಳಿದು ಬಿಟ್ಟರೆ ಪ್ರಯತ್ನಿಸುವ ಗೊಡವೆಗೇ ಹೋಗರು. ಅಂತಹ ಜನರಿಂದ ಯಾವ ಸಾಧನೆಯೂ ಆಗಲಾರದು. ಕೇವಲ ಸೋಮಾರಿಗಳಾಗುವರು. ಆಗ ಸಾಧಾರಣ ಮೃಗಗಳಿಗೂ ಮಾನವರಿಗೂ ವ್ಯತ್ಯಾಸವೇನೂ ಇರುವುದಿಲ್ಲ ಮಾತ್ರವಲ್ಲ, ಮೃಗಗಳಿಗಿಂತಲೂ ಹೀನರೇ ಆಗುವರು. ಮೃಗಗಳಾದರೂ ಏನೋ ಕೆಲಸ ಮಾಡುತ್ತವೆ. ಹೀಗೆ ಭವಿಷ್ಯತ್ತನ್ನು ಖಂಡಿತವಾಗಿ ತಿಳಿದು ಜನರು ತಮ್ಮ ಕೆಲಸ ಬಿಟ್ಟುಬಿಟ್ಟರೆ, ಅದು ದೇಶಕ್ಕೆ ದೊಡ್ಡ ಅನಿಷ್ಟವೆಂತಲೇ, ಮಂತ್ರಿ ದಿವ್ಯಜ್ಞಾನಿಯನ್ನು ದೂರ ಕಳುಹಿಸಿಬಿಟ್ಟನು."

ಹೀಗೆ ರಾಜನಿಗೆ ಮೌನಭಂಗವಾದ ಕ್ಷಣದಲ್ಲಿ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಸೇರಿ ನೇತಾಡ ತೊಡಗಿತು.



# ಸತ್ಯವಂತಳು

ಕೆಲವು ನೂರು ವರ್ಷಗಳ ಹಿಂದೆ ಸಿಂಧು ದೇಶದಲ್ಲಿ ಸೋಮನಾಥನೆಂಬ ಬ್ರಾಹ್ಮಣನಿದ್ದನು. ಅವನ ಮಗನಾದ ವಜ್ರನಾಭನು ಪ್ರಾಯಕ್ಕೆ ಬಂದ ಮೇಲೆ ಬೆಸ್ತ ಕನ್ಯೆಯೊಬ್ಬಳನ್ನು ಪ್ರೇಮಿಸ ತೊಡಗಿದನು. ಅವಳು ತುಂಬಾ ಚೆಲುವೆಯಾಗಿದ್ದಳು. ಅವಳು ಬೆಸ್ತ ಕನ್ಯೆಯೆಂದು ಉಡುಪಿನಿಂದಷ್ಟೇ ಗೊತ್ತಾಗಬೇಕಿತ್ತು.

ತಾನು ಬೆಸ್ತ ಕನ್ಯೆಯನ್ನು ಮದುವೆಯಾಗುವೆನೆಂದರೆ ತಂದೆ ಒಪ್ಪಿಕೊಳ್ಳಲಾರರು. ಅದಕ್ಕೇನು ಮಾಡುವುದೆಂದು ತೋರದೆ ವಜ್ರನಾಭನು ತನ್ನ ಸ್ನೇಹಿತನ ಹತ್ತಿರ ಎಲ್ಲವನ್ನೂ ಮುಚ್ಚುಮರೆ ಮಾಡದೆ ಹೇಳಿ, ಅವನ ಆಲೋಚನೆ ಕೇಳಿದನು.

"ಆ ಹುಡುಗಿಗೆ ಒಳ್ಳೆಯ ಬಟ್ಟೆಗಳನ್ನು ಉಡಲುಕೊಟ್ಟು, ಅವಳು ಬ್ರಾಹ್ಮಣರ ಹುಡುಗಿ ಎಂದು ಹೇಳು. ಅವಳನ್ನೇ ಮದುವೆಯಾಗುತ್ತೇನೆಂದು ಹೇಳು, ಒಪ್ಪಿಕೊಳ್ಳುತ್ತಾರೆ. ಮದುವೆಯಾದ ಮೇಲೆ ಗೊತ್ತಾದರೆ, ಆಗಲಿಬಿಡು" ಎಂದನು ಸ್ನೇಹಿತ.

ಅದರಂತೆ ವಜ್ರನಾಭನು ತನ್ನ ಪ್ರಿಯಳಿಗೆ ಒಳ್ಳೆಯ ಸೀರೆರವಿಕೆ ಕೊಟ್ಟು ತೊಡಲು ಹೇಳಿದನು. ಅವಳನ್ನು ಕರೆದುಕೊಂಡು ತಂದೆಯ ಬಳಿಗೆ ಹೋಗಿ, "ಇವಳು ನಾನು ಪ್ರೇಮಿಸಿದ ಬ್ರಾಹ್ಮಣ ಹುಡುಗಿ. ನಾನು ಇವಳನ್ನು ಮದುವೆಯಾಗುತ್ತೇನೆ" ಎಂದನು.

ಅದನ್ನು ಕೇಳಿ ಆ ಹುಡುಗಿ ಗಾಬರಿಯಿಂದ "ಅಲ್ಲ! ಸುಳ್ಳು! ನಾನು ಬ್ರಾಹ್ಮಣ ಹುಡುಗಿಯಲ್ಲ. ಬೆಸ್ತರ ಹುಡುಗಿ!" ಎಂದಳು.

ಸೋಮನಾಥನು ಮಗನ ಕೆಪ್ಪಡೆಗೊಂದು ಬಾರಿಸಿ, "ಸುಳ್ಳು ಹೇಳಲು ನಾಚಿಕೆಯಿಲ್ಲವೇ? ಇಷ್ಟೊಂದು ಸತ್ಯಸಂಧಳಾದ ಹುಡುಗಿ ನನ್ನ ಸೊಸೆಯಾಗುವುದಕ್ಕೆ ನನಗೇನೂ ಅಭ್ಯಂತರವಿಲ್ಲ. ಆದರೆ ಈಗ ಆ ಹುಡುಗಿ ನಿನ್ನನ್ನು ಮದುವೆಯಾಗುವಳೋ ಇಲ್ಲವೊ ತಿಳಿದುಕೋ" ಎಂದನು.





# ನೆರೆಮನೆಯವಳಹಾಗೆ

ಒಂದು ಊರಿನಲ್ಲಿ ಜಾನಕಿ ಮತ್ತು ಪಾರ್ವತಿಯರು ನೆರೆಕರೆಮನೆಯ ಗೃಹಿಣಿಯರಾಗಿದ್ದರು. ಅವರೊಳಗೆ ಪಾರ್ವತಿಯ ಗುಣಕ್ಕೂ ಜಾನಕಿಯ ಗುಣಕ್ಕೂ ವ್ಯತ್ಯಾಸವಿದ್ದಿತು. ಪಾರ್ವತಿ ಆದಾಯಕ್ಕೆ ತಕ್ಕ ಹಾಗೆ ಮಿತವ್ಯಯದ ಸೂತ್ರದಲ್ಲಿ ಸಂಸಾರ ಸಾಗಿಸುತ್ತ ಸುಖಿವಾಗಿದ್ದಳು. ಜಾನಕಿಯಲ್ಲಿ ಅಸೂಯೆಯೇ ತಲೆಯೆತ್ತಿಕೊಂಡಿರುತ್ತಿತ್ತು. ತಾನು ಪಾರ್ವತಿಗಿಂತ ವೈಭವದಲ್ಲಿರಬೇಕೆಂಬುದು ಅವಳ ಇಚ್ಛೆ. ಅದಕ್ಕಾಗಿ ಅವಳು ಹಚ್ಚಿನ ಬೆಲೆಯ ಸಾಮಾನುಗಳನ್ನು ಕೊಂಡುಕೊಂಡು ತನ್ನ ಮನೆಯನ್ನು ಸುಂದರವಾಗಿ ಅಲಂಕಾರಮಾಡುತ್ತಿದ್ದಳು. ಆದರೂ ಶುಭ್ರತೆ ಸ್ವಚ್ಛತೆಗಳಿಂದ ಬೇಕಾದಷ್ಟೇ ಸಾಮಾನುಗಳಿರುವ ಪಾರ್ವತಿಯ ಮನೆಯೇ ಹೆಚ್ಚಿನ ವೈಭವದಿಂದ ಕಾಣುತಿದ್ದಿತು. "ಮನೆ ಇಟ್ಟುಕೊಳ್ಳುವ ಕ್ರಮ ಪಾರ್ವತಿಯಿಂದ ಕಲಿಯಬೇಕು" ಎಂದು ಇತರ ಹೆಂಗುಸರು ಹೇಳುತ್ತಿದ್ದರು. ಇದರಿಂದ ಜಾನಕಿ ಅಸೂಯೆಯನ್ನು ತಾಳಲಾರದೆ ತನ್ನ ಗಂಡನ ಹತ್ತಿರ ಉಪಾಯ ಕೇಳುತ್ತಿದ್ದಳು.

ಅವಳ ಕಾಟದಿಂದ ಬೇಸತ್ತ ಗಂಡ, "ನೀನು ನೆರೆಮನೆಯವರನ್ನು ಮೀರಿಸಬೇಕೆಂದು ಮನೆಯನ್ನೇ ಗುಂಡಾಂತರ ಮಾಡತ್ತೀ. ಇನ್ನು ಮೇಲೆ ಮುಂದಾಗಿ ನೀನು ಏನನ್ನೂ ಕೊಂಡುಕೊಳ್ಳಬೇಡ. ಪಕ್ಕದ ಮನೆಯವರು ಏನನ್ನಾದರೂ ಕೊಂಡುಕೊಳ್ಳುವ ವರೆಗೆ ನಿಂತು, ಆ ಮೇಲೆ ಅದನ್ನೇ ಕೊಂಡುಕೋ. ಆಗ ನಾವು ಅವರೊಂದಿಗೆ ಸಮಾನವಾಗಿಯಾದರೂ ಇರಬಹುದಷ್ಟೇ?" ಎಂದನು.

ಗಂಡ ಹೇಳಿದ ಹಾಗೆಯೇ ಮಾಡಲು ತೊಡಗಿದಾಗ ಜಾನಕಿಗೆ ಸ್ವಲ್ಪ ಮನಃಶಾಂತಿಯುಂಟಾಯಿತು. ತಾನೀಗ ನೆರೆಮನೆಯ ಪಾರ್ವತಿಗೆ ಸರಿಸಮಳಾಗಿರುವೆನೆಂದು ಭಾವಿಸಿಕೊಂಡು ನೆಮ್ಮದಿಗೊಂಡಳು.

ಜಾನಕಿಗೂ, ಪಾರ್ವತಿಗೂ ಮಕ್ಕಳಾಗಿರಲಿಲ್ಲ. ಆದರೆ ಆ ವಿಷಯವನ್ನು ಕುರಿತು ಅವರೇನೂ ಚಿಂತೆ ವ್ಯಕ್ತಪಡಿಸಿಕೊಂಡಿರಲಿಲ್ಲ. ಇನ್ನುಮೇಲೆ ಮಕ್ಕಳು ಹುಟ್ಟುವುದಿಲ್ಲವೆಂಬಷ್ಟು ವಯಸ್ಸೂ ಅವರಿಗೆ ಆಗಿರಲಿಲ್ಲ. ಹಾಗಿರುವಾಗ ಆ ಊರಿಗೆ ಒಬ್ಬ ಸಾಧು ಬಂದು, ಎಲ್ಲರಿಗೂ ಸಹಜವಾಗಿರುವ ಆಶೆಗಳು ನೆರವೇರುವಂತೆ ಆಶೀರ್ವದಿಸುತ್ತಾನೆಂದು ಅವರಿಗೆ ಗೊತ್ತಾಯಿತು.

ಪಾರ್ವತಿ ಆ ಸಾಧುವನ್ನು ದರ್ಶನಮಾಡಲು ಹೋದಳು. ಪಾರ್ವತಿ ಅಲ್ಲಿಗೆ ಹೋಗುವಳೆಂದು

ಜಿ. ರಾಮಲಕ್ಷ್ಮಿ

ತಿಳಿದು ಜಾನಕಿಯೂ ಅಲ್ಲಿಗೇ ಹೊರಟಳು. ಇಬ್ಬರೂ ಸಾಧುವಿನ ಮುಂದೆ ಅಡ್ಡಬಿದ್ದು, ಪೂಜಿಸಿ ಕೈಜೋಡಿಸಿ ನಿಂತರು. ಸಾಧು ಅವರ ಮೇಲೆ ಕನಿಕರಗೊಂಡಂತೆ ಇಬ್ಬರಿಗೂ ಒಂದು ಮಂತ್ರವನ್ನು ಉಪದೇಶಿಸಿ, "ಇದನ್ನು ಜಪಿಸುತ್ತಾ ಇದ್ದರೆ ನಿಮ್ಮಲ್ಲಿ ಗಾಢವಾಗಿರುವ ಆಶೆ ನೆರವೇರುತ್ತದೆ" ಎಂದನು.

ಇಬ್ಬರೂ ಮನೆಗೆ ಹಿಂದಿರುಗಿದರು. ಪಾರ್ವತಿ ತನಗೆ ಸುಂದರನಾದ ಮಗನು ಹುಟ್ಟಬೇಕೆಂದು ಕೊಂಡು ಮಂತ್ರವನ್ನು ಜಪಿಸ ತೊಡಗಿದಳು.

ಈಗ ಜಾನಕಿ ದೊಡ್ಡ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಂತಾದಳು. ಪಾರ್ವತಿ ಏನನ್ನು ನೆನೆಯುತ್ತ ಮಂತ್ರವನ್ನು ಜಪಿಸುವಳೋ? ಅವಳಿಗೆ ಸರಿಸಮವಾಗಿ ತಾನೂ ಇರಬೇಕಾದರೆ ಹೇಗೆ? ಗಂಡನು ಹೇಳಿದಂತೆ ಪಾರ್ವತಿಗೆ ಏನು ಸಿಗುವುದೋ ಅದೇ ತನಗೂ ಸಿಗಬೇಕಲ್ಲ? ಹೀಗೆ ಯೋಚಿಸಿ ಕಡೆಗೆ ಪಾರ್ವತಿಗೆ ಸಿಗುವಂತಹುದೇ ತನಗೂ ಸಿಗಬೇಕು ಎಂದು ಕೋರುತ್ತ ಮಂತ್ರವನ್ನು ಜಪಿಸ ತೊಡಗಿದಳು.

ಹೀಗಿರಲು ಕಾಲಕ್ರಮದಲ್ಲಿ ಪಾರ್ವತಿಗೆ ಮುದ್ದಾದ ಗಂಡು ಮಗು ಹುಟ್ಟಿತು. ಮಂತ್ರಪ್ರಭಾವದಿಂದಲೋ ಎಂಬ ಹಾಗೆ ಜಾನಕಿಗೂ ಮುದ್ದಾದ ಮಗು ಹುಟ್ಟಿತು. ಜಾನಕಿ ಮಂತ್ರವನ್ನು ತುಂಬ ಬುದ್ಧಿವಂತಿಕೆಯಿಂದ ಉಪಯೋಗಿಸಿದಳೆಂದು ಗಂಡನು ಅವಳನ್ನು ತುಂಬಾ ಹೊಗಳಿದನು. ತಾನು ಹಾಗೆಮಾಡಲು ಗಂಡನೇ ಕಾರಣನಾದುದರಿಂದ ಅವಳು ಗಂಡನನ್ನು ಬಾಯಿ ತುಂಬ ಹೊಗಳಿದಳು.

ಹೀಗಿರುವಾಗ ಒಂದು ದಿನ ರಾತ್ರಿ ಪಾರ್ವತಿಯ ಮನೆಗೆ ಕಳ್ಳರುನುಗ್ಗಿ ಇದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಅದೇ ದಿನ ರಾತ್ರಿ ಜಾನಕಿಯ ಮನೆಗೂ ಕಳ್ಳರು ಪ್ರವೇಶಿಸಿ ಕೊಳ್ಳೆ ಹೊಡೆದುಕೊಂಡು ಹೋದರು. ಈ ಕಳ್ಳತನದಿಂದ ಹೆಚ್ಚಿಗೆ ನಷ್ಟಪಟ್ಟವಳು ಪಾರ್ವತಿಯೇ. ಏಕೆಂದರೆ ಅವಳಿಗೆ ಸಹಾಯಮಾಡುವವರು ಯಾರೂ ಇರಲಿಲ್ಲ. ಅವಳಿಗಾದ ನಷ್ಟ ಕೂಡಿ ಬರಬೇಕಾದರೆ ಇನ್ನು ಅನೇಕ ವರ್ಷಗಳಾಗಬೇಕು. ಜಾನಕಿಗಾದರೋ ಹಾಗಲ್ಲ, ಅವಳಿಗೆ ಅನೇಕರು ಸಹಾಯಮಾಡುವವರಿದ್ದಾರೆ. ಅವಳ ಅನೇಕ ಬಂಧುಗಳು ಅವಳಿಗಾದ ನಷ್ಟವನ್ನು ತಿಳಿದುಬಿಟ್ಟರೆ ಕೆಲವೇ ನಿಮಿಷಗಳಲ್ಲಿ ಸರಿಮಾಡಿಬಿಡಬಲ್ಲವರು. ಆದರೆ ಮಂತ್ರ ಪ್ರಭಾವದಿಂದಾಗಿ ಅವಳ ಸಹಾಯಕ್ಕೆ ಯಾರೂ ಬರಲಿಲ್ಲ! ಸಾಧುವಿನ ಮಂತ್ರವು ತಿರುಗಿ ಹೊಡೆದಂತಾಗಿತ್ತು. ನೆರೆಯವಳು ಏನೇನು ಕಷ್ಟ ಸುಖ ಅನುಭವಿಸುವಳೋ ಅದೆಲ್ಲ ತನಗೂ ಬರುತ್ತದೆಂದು ಈಗ ತಿಳಿಯಿತು. ಇನ್ನುಮೇಲೆ ಪಾರ್ವತಿಗೆ ಯಾವ ಕಷ್ಟವೂ ಬರಬಾರದೆಂದು ದಿನಾ ಸಾವಿರ ದೇವರಿಗೆ ನಮಸ್ಕಾರಮಾಡುತ್ತಿದ್ದಳು ಜಾನಕಿ.





# ಮುಗ್ಧ

ಒಂದು ಊರಿನಲ್ಲಿ ದೂಮನೆಂಬುವನು ಸಣ್ಣತನದಿಂದಲೂ ಮುಗ್ಧನಾಗಿಯೇ ಬೆಳೆದನು. ಅವನು ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಅಜ್ಜಿಯ ಆಶ್ರಯದಲ್ಲಿ ಬೆಳೆದನು. ಅವನದು ಒಳ್ಳೆಯ ಮನಸ್ಸೇ ಆದರೂ, ಒಳಿತು ಯಾವುದು ಕೆಡುಕು ಯಾವುದು ಎಂಬುದನ್ನು ಅರ್ಥ ಮಾಡಿಕೊಳ್ಳಲಾರದೆ ಯಾವಾಗಲೂ ನಾಲ್ಕು ಮಂದಿಯಿಂದ ಬೈಗಳು ತಿನ್ನುತ್ತಿದ್ದನು. ಬೈಗಳು ಕೇಳಿ ಕೇಳಿ ಅವನ ಮನಸ್ಸು ಇನ್ನಿಷ್ಟು ಜಡವೇ ಆಯಿತು.

ಒಂದು ಸಾರಿ ಮಳೆಬಾರದುದರಿಂದ ಊರ ಬಾವಿಗಳೆಲ್ಲ ಬತ್ತಿಹೋದುವು. ಊರಿನವರು ದೂರದಲ್ಲಿದ್ದ ನದಿಯಿಂದ ನೀರು ತಂದುಕೊಳ್ಳಬೇಕಾಗಿ ಬಂತು. ಒಂದು ದಿನ ಮುಗ್ಧ ದೂಮನು ಬೀದಿಯಲ್ಲಿ ನಡೆಯುತ್ತಿದ್ದಾಗ, ಪ್ರಾಯ ಮೀರಿದ ಹೆಂಗಸೊಬ್ಬಳು ಒಂದು ಬಿಂದಿಗೆಯನ್ನು ಹೊರಲಾರದೆ ಹೊರುತ್ತ ಒಂದು ದಂಡೆಯ ಮೇಲೆ ಬಿಂದಿಗೆಯನ್ನಿಳಿಸಿ, ಮತ್ತೆ ಅದನ್ನು ಎತ್ತಿಕೊಳ್ಳಲು ಪ್ರಯಾಸಪಡುತ್ತ, "ಅಬ್ಬ! ಭಾರವೇ! ಏಕೆ ಇಷ್ಟು ದೊಡ್ಡ ಬಿಂದಿಗೆ ತಂದೆನೋ!" ಎಂದು ಹೇಳಿಕೊಂಡಳು. ಅದನ್ನು ನೋಡಿ ದೂಮನು ಅವಳಿಗೆ ಸಹಾಯ ಮಾಡೋಣವೆಂದು ಬಿಂದಿಗೆಯನ್ನು ಹೊತ್ತುಕೊಳ್ಳಲು ನೋಡಿದನು. ಅವನು ಮುಟ್ಟಿದ್ದೇ ತಡ- ಆ ಹೆಂಗುಸು ಸಿಟ್ಟು ಬೆಂಕಿಯಾಗಿ, "ಹಾಯ್ಯೋ! ಪಾಪಿ! ಮಡಿನೀರು, ಮುಟ್ಟಿ ಹಾಳು ಮಾಡಿದೆಯಲ್ಲೋ! ದುರ್ಭಾಗ್ಯ ಬಡಿದವನೇ!" ಎಂದು ಬೈಯುತ್ತ ಬಿಂದಿಗೆ ನೀರನ್ನು ಅವನ ತಲೆಗೇ ಸುರಿದು ಮತ್ತೆ ನದಿಯ ಕಡೆಗೆ ಹೋದಳು.

ದೂಮನು ಒದ್ದೆಮುದ್ದೆಯಾಗಿ ಮನೆಗೆ ಹೋಗಿ ಅವ್ವನಿಂದ ಬೇರೆ ಸ್ವಲ್ಪ ಬೈಗುಳು ತಿಂದನು.

ಇನ್ನೊಂದು ಸಾರಿ ದೂಮನು ಅವ್ವ ಹೇಳಿದಂತೆ ತರಕಾರಿ ಕೊಂಡುಕೊಂಡು ಬರುತ್ತಿದ್ದಾಗ, ಒಬ್ಬ ಹುಡುಗನು ಓಡುತ್ತಾ ಬರುವುದನ್ನು ನೋಡಿದನು. ಅವನ ಹಿಂದೆಯೇ ಒಬ್ಬ ಮುದುಕನು "ನಿಲ್ಲು ನಿಲ್ಲೋ! ಪುಂಡ ಪೋರಾ! ಎಷ್ಟು ದೂರ ಓಡಿದರೂ ನಿನ್ನನ್ನು ಬಿಡಲಾರೆ. ಎರಡೇಟು ಕೊಟ್ಟರೆ ಹೊರತು ನಿನಗೆ ಬುದ್ಧಿ ಬಾರದು!" ಎಂದು ತೇಕುತ್ತ ಓಡಲಾಗದೆ ಓಡುತ್ತ ಬರುತ್ತಿದ್ದನು. ದೂಮನು ಆ ಮುದುಕನಿಗೆ ಸಹಾಯ ಮಾಡುವ

ಎಂ. ಕೆ. ಈಶ್ವರರಾವು

ಸದುದ್ದೇಶದಿಂದ ಹುಡುಗನನ್ನು ಹಿಡಿದುಕೊಂಡು, ಎರಡು ಏಟುಗಳನ್ನು ಅವನ ಬೆನ್ನಿಗೆ ಕೊಟ್ಟು, "ಕಷ್ಟಪಡಬೇಡಿ ತಾತಯ್ಯಾ. ನಾನೇ ಎರಡೇಟು ಕೊಟ್ಟೆ. ಆದರಿಂದ ಅವನಿಗೆ ಒಳ್ಳೇ ಬುದ್ಧಿ ಬರುತ್ತೆ ಬಿಡಿ" ಎಂದನು.

ಪೆಟ್ಟು ತಿಂದ ಹುಡುಗ ಕೆಟ್ಟುದಾಗಿ ಕಿರುಚಿದನು. ಯಾವನೋ ದಾರೀಹೋಕನು ತನ್ನ ಮೊಮ್ಮಗನನ್ನು ಹೊಡೆದುದನ್ನು ನೋಡಿ ಮುದುಕ ಕೆಟ್ಟ ಕೋಪದಿಂದ, "ಯಾರೋ ನೀನು? ಸಣ್ಣ ಹುಡುಗನನ್ನು ಹೊಡೆಯಲು ನೀನೆಷ್ಟರವನು? ಗರ್ವ ನೆತ್ತಿಗೇರಿತೆ?..." ಎಂದು ಬೈದು ಮೊಮ್ಮಗನನ್ನು ಸಮಾಧಾನ ಪಡಿಸಿ ಕರೆದುಕೊಂಡು ಹೋದನು. ಈ ಗೊಡವೆಯಿಂದ ಬೀದಿಯಲ್ಲಿ ಗುಂಪು ಸೇರಿದ ಜನರೂ ಸಹ ದೂಮನನ್ನು ಬೈದುಕೊಂಡು ಹೋದರು.

ದೂಮನು ದಿಗಿಲುಬಿದ್ದ ಮೋರೆ ಮಾಡಿಕೊಂಡು ಮನೆಗೆ ಹೋಗಿ ನಡೆದ ಸಂಗತಿಯನ್ನು ಅವ್ವನೊಂದಿಗೆ ಹೇಳಿ ಅವಳಿಂದಲೂ ಮತ್ತಷ್ಟು ಬೈಗಳು ತಿಂದನು.

ಒಂದು ವರ್ಷ ಗಂಗಾಪುಷ್ಕರವೆಂಬ ಪರ್ವಕಾಲದಲ್ಲಿ ಎಲ್ಲರೂ ನದಿಗೆ ಹೋಗಿ ಸ್ನಾನ ಮಾಡುವಂತೆ ದೂಮನೂ ನದಿಯಲ್ಲಿ ಮಿಂದು ಸ್ವಲ್ಪ ದೂರದಲ್ಲಿ ಬಟ್ಟೆಯಾರಿಸಿ ಕುಳಿತಿದ್ದನು. ಆಗ ಗಂಡಹೆಂಡತಿಯರಿಬ್ಬರು, ಸ್ನಾನ ಮಾಡುತ್ತ ಮೊದಲು ಗಂಡನು ಮೇಲೇರಿ ಮುಂದೆ ಹೋದನು. ಹಿಂದಿನಿಂದ ಏರಿ ಬರುತ್ತಿದ್ದ ಹೆಂಡತಿ ಎತ್ತರವಾದ ಮೆಟ್ಟಲ ಮೇಲೆ ಹತ್ತಲಾಗದೆ ಕೈಯನ್ನು ಮೇಲೆತ್ತಿ "ಹಿಡೀರಿ, ಹಿಡೀರಿ" ಎಂದಳು ತನ್ನ ಗಂಡನಿಗೆ. ಗಂಡನು ಗಮನಿಸದಿರಲು, ಅಲ್ಲೇ ಇದ್ದ ದೂಮನು ತಟ್ಟನೆ ಹೋಗಿ ಅವಳ ಕೈಹಿಡಿದು ಮೇಲೆ ಎತ್ತಿದನು.

ಗಂಡನು ಕೋಪದಿಂದುರಿದು ಹಿಂದಿರುಗಿ ಬಂದು ದೂಮನ ಶ ರೀ ರ ದ ಲ್ಲಿ ಬಾಸುಂಡೆಗಳನ್ನು ಬರಿಸಿ ಹೋಗಲು ಬಿಟ್ಟನು.

ಆ ಸಮಯದಲ್ಲಿ ಅವ್ವಕಾಯಿಲೆಯಲ್ಲಿ ಮಲಗಿದ್ದಳು. ತನ್ನ ಮೊಮ್ಮಗನು ಶರೀರದಲ್ಲಿ ಗಾಯ ಮಾಡಿಕೊಂಡು ಬಂದು ಅಳುವುದನ್ನು ನೋಡಿ ಆ



ಮುದುಕಿ, "ಕಂದಾ! ನೀನು ಒಳ್ಳೆಯವನೇ ಹೊರತು ಕೆಟ್ಟವನಲ್ಲವಪ್ಪಾ! ಆದರೂ ನಾನಿರುವಾಗಲೇ ನಿನ್ನ ಗತಿ ಹೀಗಾಗುತ್ತಿದೆಯಲ್ಲಾ? ಇನ್ನು ನಾನು ಹೋದ ಮೇಲೆ ನಿನಗಾಗಿ ಕನಿಕರಪಡುವವರು ಯಾರೂ ಇರಲಾರರು. ನಿನ್ನ ಏನೂ ಅರಿಯದ ಸರಳ ಗುಣ ವನ್ನು ಯಾರೂ ಅರಿಯರು. ನೀನಿರುವುದನ್ನೇ ಸಹಿಸರು. ನಾನು ಬೂದಿಯಾಗಿ ಹೋದ ಮೇಲೆ ನೀನು ಈ ಊರಿನಲ್ಲಿರಬೇಡ. ಬೇರೆಲ್ಲಿಗಾದರೂ ಹೋಗಿ ಬದುಕಪ್ಪ. ಎಲ್ಲಿಗೆ ಹೋದರೂ ನಿನ್ನನ್ನು ಕರೆದು ಸಹಾಯ ಕೇಳಿದವರಿಗೆ ಹೊರತು ಬೇರೆ ಯಾರಿಗೂ ಯಾವ ಸಹಾಯವನ್ನೂ ಮಾಡಲು ಹೋಗಬೇಡ" ಎಂದು ಹೇಳಿದಳು.

ಆ ಮೇಲೆ ಅಜ್ಜಿ ಹೆಚ್ಚು ದಿನ ಬದುಕಲಿಲ್ಲ. ಅಜ್ಜಿಯ ಉತ್ತರ ಕ್ರಿಯೆಗಳೆಲ್ಲ ಮುಗಿದ ಮೇಲೆ, ಅಜ್ಜಿಯ ಮಾತನ್ನು ನೆನಪಿಟ್ಟುಕೊಂಡು ದೂಮನು ಬದುಕುವದಾರಿ ನೋಡಿಕೊಳ್ಳಲು ಇನ್ನೊಂದು ಊರಿಗೆ ಹೋದನು.

ಅವನು ಕಾಡುದಾರಿಯಲ್ಲಿ ಹೋಗುತ್ತಾ ಇರು ವಾಗ ದಾರಿಯ ಬದಿಯಲ್ಲಿದ್ದ ಪಾಳು ಬಾವಿಯೊಳಗಿ ನಿಂದ "ರಕ್ಷಿಸಿರಪ್ಪಾ! ರಕ್ಷಿಸಿರಯ್ಯಾ!" ಎಂದು ಆರ್ತನಾದ ಕೇಳಿಬರತೊಡಗಿತು.

ಅಲ್ಲಿಗೆ ಓಡಬೇಕೆಂದು ದೂಮನಿಗೆ ಕಾಲುತುಡಿಸಿ ದರೂ, ಅವ್ವ ಹೇಳಿದ ಮಾತುಗಳು ನೆನಪಿಗೆಬಂದು, ಗಕ್ಕನೆ ನಿಂತನು. ಹಾಗೆ ಕೂಗುವವರು ತನ್ನ ಹೆಸರು ಹಿಡಿದು ಕರೆಯಲಿಲ್ಲವಲ್ಲಾ? ಸುಮ್ಮನೆ ಕೂಗುವ ವರಿಗೆ ಸಹಾಯ ಮಾಡಬಾರದಷ್ಟೇ? ಹಾಗೆ ಮಾಡಿದರೆ ತಾನೇ ತಪ್ಪುಗಾರನಾಗುತ್ತೇನಲ್ಲಾ!

ಹೀಗೆ ನೆನೆದು ದೂಮನು ತಟಸ್ಥನಾಗಿರಲು, ಇಬ್ಬರು ರಾಜಭಟರು ಆ ಕಡೆಗೆ ಬಂದು ಬಾವಿಯಿಂದ ಬರುವ ಆರ್ತನಾದವನ್ನು ಕೇಳಿದರು. ಅಲ್ಲಿಯೇ ಬೆಪ್ಪುಬಡೆದಂತೆ ನಿಂತ ದೂಮನನ್ನು ನೋಡಿ ಅವರಿಗೆ ಅನುಮಾನವಾಗಿ, ಅವನನ್ನು ಸಮೀಪದ ಮರಕ್ಕೆ ಕಟ್ಟಿ ಹಾಕಿದರು. ಆಮೇಲೆ ಬಳ್ಳಿಯ ಸಹಾಯ ದಿಂದ ಬಾವಿಯಲ್ಲಿ ಬಿದ್ದವನನ್ನು ಮೇಲಕ್ಕೆ ಎತ್ತಿದರು.



ಬಾವಿಯಲ್ಲಿ ಬಿದ್ದವನು ರಾಜಭಟರೊಂದಿಗೆ "ನಾನು ವ್ಯಾಪಾರದ ನಿಮಿತ್ತ ನಗರಕ್ಕೆ ಹೊರಟಿದ್ದೆನು. ಈ ದಾರಿಯಲ್ಲಿ ಬರುವಾಗ ದಾಹವಾಗಿ ಬಾವಿಯಲ್ಲಿ ನೀರಿದೆಯೋ ಅಂತ ಬಾಗಿ ನೋಡಿದೆನು. ಆಗ ಯಾವನೋ ಒಬ್ಬ ಕಳ್ಳ ನನ್ನ ಕೈಯಲ್ಲಿದ್ದ ಚೀಲವನ್ನು ಎಳೆದುಕೊಂಡು ನನ್ನನ್ನು ಬಾವಿಗೆ ದೂಡಿದ. ಪುಣ್ಯ ಕಾಲ. ಬಾವಿಯಲ್ಲಿ ಹೆಚ್ಚು ನೀರಿಲ್ಲದ್ದರಿಂದ ಬದುಕಿದ್ದೇನೆ! ಗಾಬರಿಯಾಯಿತೇ ಹೊರತು ಏನೂ ಪೆಟ್ಟಾಗಲಿಲ್ಲ" ಎಂದನು.

"ನಿನ್ನನ್ನು ಬಾವಿಗೆ ದೂಡಿದ ಕಳ್ಳ ಇವನೇ ಆಗಿರಬೇಕು." ಎಂದು ರಾಜಭಟರು ಆ ಮನುಷ್ಯನಿಗೆ ದೂಮನನ್ನು ತೋರಿಸಿದರು.

ದೂಮನು ಅಳುತ್ತ "ನನಗೆ ಅದು ಯಾವುದೂ ಗೊತ್ತಿಲ್ಲರೀ! ನಾನು ಬಾವಿಯಲ್ಲಿ ಕೂಗುವ ಶಬ್ದ ಕೇಳಿ ಇಲ್ಲಿಗೆ ಬಂದೆ. ಬಾವಿಯಲ್ಲಿರುವವನನ್ನು ಕಾಪಾಡಬೇಕಂತಲೇ ಮಾಡಿದೆ. ಆತ ನನ್ನ ಹೆಸರು ಕರೆಯಲೇ ಇಲ್ಲ ಅಂತ ಸುಮ್ಮನಿದ್ದೆ. ನನ್ನ ಅವ್ವ..." ಎಂದು ದೂಮನು ತನ್ನ ಸಮಾಚಾರವನ್ನೆಲ್ಲಾ ಹೇಳಿದನು.

ಬಾವಿಯಲ್ಲಿ ಬಿದ್ದವನಿಗೆ ದೂಮನ ತತ್ವ ಎಂತಹುದೆಂದು ಗೊತ್ತಾಯಿತು. ದೂಮನ ಊರಿನವನೇ ಆದವನಾದುದರಿಂದ ದೂಮನ ವಿಷಯ ಸ್ವಲ್ಪ ಮಟ್ಟಿಗೆ ಕೇಳಿದ್ದ. ಅವನು ರಾಜಭಟರೊಂದಿಗೆ, "ನನ್ನನ್ನು ಬಾವಿಗೆ ದೂಡಿದವನು ಈ ಮನುಷ್ಯನಲ್ಲ. ಅವನು ಇವನಿಗಿಂತಲೂ ಬಲಶಾಲಿ, ಅಲ್ಲದೆ ನನ್ನನ್ನು ಬಾವಿಗೆ ದೂಡಿ ಚೀಲ ಕದ್ದವನು ಇನ್ನೂ ಇಲ್ಲಿಯೇ ಏಕೆ ನಿಂತುಕೊಂಡಿದ್ದಾನು? ನನ್ನ ಚೀಲವೂ ಇವನ ಹತ್ತಿರ ಇಲ್ಲ." ಎಂದನು.

"ಹಾಗಾದರೆ ನಿಜವಾದ ಕಳ್ಳನನ್ನು ಹುಡುಕಿ ಹಿಡಿಯೋಣ" ಎಂದು ರಾಜಭಟರು ಬೇಗಬೇಗ ಹೊರಟುಹೋದರು.

ತರುವಾಯ ಬಾವಿಯಲ್ಲಿ ಬಿದ್ದವನು ದೂಮನೊಂದಿಗೆ, "ನಿನ್ನ ಸಂಗತಿ ನಾನು ಸ್ವಲ್ಪ ಕೇಳಿದ್ದೇನೆ. ನಿನ್ನ ಅವ್ವ ತೀರಿ ಹೋದಳಷ್ಟೆ? ಇನ್ನು ನೀನು ಬೇರೆಲ್ಲಿಯೂ ಬದುಕಲಾರೆ. ನನ್ನೊಂದಿಗೆ ಬಾ. ನನ್ನ ತೋಟದ ಕೆಲಸ ನೋಡಿಕೊಂಡು ತೋಟದ ಮನೆಯಲ್ಲೇ ಇರುವೆಯಂತೆ. ಬಾಯಿಬಾರದ ಗಿಡಗಳು ನಿನ್ನ ಸಹಾಯಕ್ಕೆ ಇದಿರಾಡವು. ನಾನು ನೋಡಿಕೊಳ್ಳುತ್ತೇನೆ, ಬಾ" ಎಂದನು.

ದೂಮನು ಸಂತೋಷದಿಂದ ಒಪ್ಪಿ ಅವನೊಂದಿಗೆ ಹೋದನು. ಅಲ್ಲಿ ಅವನು ತೋಟದ ಕೆಲಸ ಮಾಡುತ್ತ. ಯಾರಿಂದಲೂ ಯಾವ ಬೈಗುಳನ್ನೂ ಕೇಳದೆ ಚೆನ್ನಾಗಿಯೇ ಬದುಕಿದನು. ಮದುವೆಯೂ ಆಯಿತು ಅವನಿಗೆ.





# ದಧೀಚಿ

**ಸು**ಪ್ರಸಿದ್ಧನಾದ ಚ್ಯವನ ಮಹರ್ಷಿಯ ಮಗನಾದ ದಧೀಚಿ ಸಾರಸ್ವತ ತೀರ್ಥಗಳಲ್ಲಿ ತಪಸ್ಸು ಮಾಡಿ ಕೊಂಡಿದ್ದನು. ಆ ಸಂಗತಿ ಇಂದ್ರನಿಗೆ ಗೊತ್ತಾಯಿತು ಅವನು ತನ್ನ ಸ್ಥಾನವನ್ನು ಆಕ್ರಮಿಸಲಿಕ್ಕಾಗಿಯೇ ತಪಸ್ಸು ಮಾಡುವನೆಂದು ಇಂದ್ರನಿಗೆ ಭಯವಾಯಿತು. ಅವನ ತಪಸ್ಸನ್ನು ಭಂಗಪಡಿಸಲಿಕ್ಕಾಗಿ ಇಂದ್ರನು ಅತಿ ಸುಂದರಿಯಾದ ಅಲಂಬುಸ ಎಂಬ ಅಪ್ಸರಸಿಯನ್ನು ಆರಿಸಿ ಕಳುಹಿಸಿದನು.

ಈ ಮೊದಲು ಇಂದ್ರನು ತನ್ನ ಜಾತಿಗೆ ಸೇರಿದ ತೊಂಬತ್ತೊಂಬತ್ತು ಮಂದಿಯನ್ನು ವಧಿಸಿ, ದೇವತೆಗಳಿಗೆ ರಾಜನೆನಿಸುವ ಇಂದ್ರತ್ವವನ್ನು ಪಡೆದಿದ್ದನು. ನೂರು ಯಜ್ಞಗಳನ್ನು ಮಾಡಿದವನಾದರೂ ತನ್ನ ಸ್ಥಾನವನ್ನು ಆಕ್ರಮಿಸುವನೆಂದು ಇಂದ್ರನಿಗೆ ಭಯ ವಿದ್ದಿತು. ತಪಸ್ಸು ಮಾಡುವವರನ್ನು ಕಂಡರೂ ಅಷ್ಟೇ ಭಯ ಇಂದ್ರನಿಗೆ. ಆದುದರಿಂದ ಯಾರು ತಪಸ್ಸು ಮಾಡಿದರೂ ಇಂದ್ರನು ಅಪ್ಸರೆಗಳಿಂದ ಅಂಥವರ ತಪಸ್ಸನ್ನು ಭಂಗ ಪಡಿಸಿ ಬಿಡುವನು.

ದಧೀಚಿಯ ವಿಷಯದಲ್ಲಿಕೂಡಾ ಇಂದ್ರನು ಗೆದ್ದನೆಂದೇ ಹೇಳಬಹುದು. ಏಕೆಂದರೆ ಅಲಂಬುಸಳು ದಧೀಚಿಯ ತಪಸ್ಸನ್ನು ಭಂಗ ಪಡಿಸಿದ್ದುಮಾತ್ರವಲ್ಲದೆ ದಧೀಚಿಯಿಂದ ಸಾರಸ್ವತನೆಂಬ ಒಬ್ಬ ಮಗನನ್ನೂ ಪಡೆದಳು.

ಆದರೂ ದಧೀಚಿ ಮಹಾ ತಪಃಶಾಲಿಯಾಗಿದ್ದನು. ಒಮ್ಮೆ ಇಂದ್ರ ಪದವಿ ಸಾವಿರ ವರ್ಷಗಳವರೆಗೆ ಖಾಲಿಯಾದಾಗ, ದಧೀಚಿ ಆ ಕಾಲದಲ್ಲಿ ಇಂದ್ರಪದವಿಯನ್ನು ನಿರ್ವಹಿಸಿದನು.

ಅವನ ಇಂದ್ರತ್ವದ ಕಾಲದಲ್ಲಿಯೇ ದಕ್ಷನಿಗೂ ದಕ್ಷನ ಅಳಿಯನಾದ ಶಿವನಿಗೂ ತಗಾದೆಯುಂಟಾಯಿತು. ಬ್ರಹ್ಮನು ಮಾಡುವ ಯಜ್ಞಕ್ಕೆ ದಕ್ಷನು ಹೋದಾಗ ಅವನನ್ನು ನೋಡಿ ಎಲ್ಲರೂ ಎದ್ದು ನಿಂತರೂ ಶಿವನು ಏಳಲಿಲ್ಲ; ದಕ್ಷನು ಆ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು, ಶಿವನನ್ನೂ ಮದುವೆಯಾದ ತನ್ನ ಮಗಳು ಸತಿಯನ್ನೂ ತಾನು ಮಾಡುವ ಯಜ್ಞಕ್ಕೆ ಕರೆಯಲಿಲ್ಲ. ಆದರೂ ಸತೀದೇವಿ ದಕ್ಷನ ಯಜ್ಞಕ್ಕೆ ಹೋಗಿ, ತಂದೆಯಿಂದ ಅವಮಾನಗೊಂಡು ಅಗ್ನಿಗೆ ಹಾರಿ ಆತ್ಮಹತ್ಯ ಮಾಡಿಕೊಂಡಳು. ಆ ಸಂಗತಿ ತಿಳಿದಕೂಡಲೇ ಶಿವನು ಕೋಪಾವೇಶದಿಂದ ಅತ್ಯುಗ್ರನಾಗಿ, ವೀರಭದ್ರನನ್ನು ಸೃಷ್ಟಿಸಿ, ಅವನ ನಾಯಕತ್ವ

ದಲ್ಲಿ ಪ್ರಮಥ ಗಣಗಳನ್ನು ದಕ್ಷವಾಟಿಕೆಗೆ ಕಳುಹಿಸಿದನು. ಆದರಿಂದ ದಕ್ಷನ ಯಜ್ಞವು ಧ್ವಂಸವಾಗಿ, ದಕ್ಷನ ತಲೆ ಹಾರಿ ಹೋಯಿತು. ತರುವಾಯ ದೇವತೆಗಳು ಆಲೋಚಿಸಿ ದಕ್ಷನ ಮುಂಡಕ್ಕೆ ಟಗರಿನ ತಲೆಯನ್ನು ತಂದು ಅಂಟಿಸಿ ಅವನು ಸಾಯದಂತೆ ಕಾಪಾಡಿದರು.

ದಕ್ಷನಿಗೂ ಶಿವನಿಗೂ ಬಂದ ಈ ವೈರದಲ್ಲಿ ದಧೀಚಿಯೊಬ್ಬನೇ ಶಿವನ ಪಕ್ಷವನ್ನು ಸಮರ್ಥಿಸಿದವನು. ಹೀಗೆ ಶಿವಭಕ್ತನಾದ ದಧೀಚಿಯ ಹೆಂಡತಿಯ ಹೆಸರು ಲೋಪಾಮುದ್ರೆ.

ದೇವತೆಗಳು ತಮ್ಮ ಅಸ್ತ್ರಗಳನ್ನು ದಧೀಚಿಯ ಹತ್ತಿರ ಅಡಗಿಸಿಡುತ್ತಿದ್ದರು. ಬೇರೆ ಎಲ್ಲಿ ಇಟ್ಟರೂ ರಾಕ್ಷಸರು ಕದ್ದುಕೊಂಡು ಹೋಗುವರೆಂದು ದೇವತೆಗಳ ಭಯ. ಒಂದುಸಾರಿ ದೇವತೆಗಳಿಗೆ ಬಹಳ ಕಾಲದವರೆಗೆ ಆಯುಧಗಳ ಅಗತ್ಯ ಬರಲಿಲ್ಲ. ದಧೀಚಿಯ ಬಳಿಯಲ್ಲಿದ್ದ ಅವರ ಅಸ್ತ್ರಗಳು ಹೇಗೋ ಕಾಣದೆ ಹೋದುವು. ಕಡೆಗೊಮ್ಮೆ ದೇವತೆಗಳು ಬಂದು ತಮ್ಮ ಆಯುಧಗಳನ್ನು ತಿರುಗಿ ಕೊಡುವಂತೆ ಕೇಳಿದರು. "ನಾನು ನಿಮ್ಮ ಅಸ್ತ್ರಗಳನ್ನು ತಿರುಗಿ ಕೊಡುವಂತಿಲ್ಲ. ಅವುಗಳನ್ನು ನುಂಗಿ ಬಿಟ್ಟೆನು !" ಎಂದನು ದಧೀಚಿ. "ನಮ್ಮ ಅಸ್ತ್ರಗಳನ್ನು ನಮಗೆ ಹಿಂದಿರುಗಿ ಕೊಡಲೇಬೇಕು !" ಎಂದು ದೇವತೆಗಳು ಬಿಡದೆ ಪಟ್ಟು ಹಿಡಿದರು. "ನಿಮ್ಮ ಅಸ್ತ್ರಗಳು ನನ್ನ ಎಲುವುಗಳಿಗೆ ಅಂಟಿ ಹೋಗಿವೆ. ನನ್ನ ಎಲುವುಗಳನ್ನು ತೆಗೆದುಕೊಂಡು ಆಯುಧಗಳಾಗಿಸಿ ಉಪಯೋಗಿಸಿಕೊಳ್ಳಿ. ಬೇರೆದಾರಿ ಯಾವುದೂ ಇಲ್ಲ." ಎಂದನು ದಧೀಚಿ.

"ನೀವು ಬದುಕಿರುವಾಗ ನಿಮ್ಮ ಎಲುವುಗಳ ಆಯುಧಗಳು ಹೇಗೆ ಬಂದಾವು ? " ಎಂದು ದೇವತೆಗಳು ಕೇಳಿದರು.

ಕೂಡಲೇ ದಧೀಚಿ ತನ್ನ ತಪಃಶಕ್ತಿಯಿಂದ ಅಗ್ನಿಯನ್ನು ಹುಟ್ಟಿಸಿ ಅದರಲ್ಲಿ ತಾನು ದಗ್ಧನಾದನು. ಅವನ ಎಲುವುಗಳಿಂದ ಬ್ರಹ್ಮನು ಚಕ್ರವನ್ನೂ, ವಜ್ರಾಯುಧವನ್ನೂ ಇತರ ಆಯುಧಗಳನ್ನೂ ಸೃಷ್ಟಿ ಮಾಡಿದನು.

ದಧೀಚಿಯ ಎಲುವಿನಿಂದ ವಜ್ರಾಯುಧಮಾತ್ರವೇ ಸೃಷ್ಟಿಯಾಯಿತೆಂದೂ ಹೇಳುತ್ತಾರೆ. ಇದು ಇಂದ್ರನಿಗೆ ಇದಿರಿಲ್ಲದ ಆಯುಧವಾಗಿ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಇದರಿಂದಲೇ ಇಂದ್ರನು ವೃತ್ರನನ್ನು ಸಂಹರಿಸಲು ಸಮರ್ಥನಾದನು. ಇಂದ್ರನ ವಜ್ರಾಯುಧವೆಂದರೆ ಹೆದರದವರು ಯಾರೂ ಇಲ್ಲ.

ದಧೀಚಿ ಸಾಯುವ ಸಮಯದಲ್ಲಿ ಲೋಪಾಮುದ್ರೆ ಗರ್ಭಿಣಿಯಾಗಿದ್ದಳು. ಮುಂದೆ ಅವಳು ಹಡೆದ ಆ ಮಗನಿಗೆ ಪಿಪ್ಪಲಾದನೆಂದು ಹೆಸರು.



# ಚಂದ್ರಹಾಸ



ಕೇರಳ ರಾಜನನ್ನು ಶತ್ರುಗಳು ಕೊಂದುಬಿಟ್ಟರು. ಅವನ ಹೆಂಡತಿ ಗಂಡನೊಂದಿಗೇ ಸಹಗಮನ ಮಾಡಿದಳು. ಅವರ ಮಗನಾದ ಚಂದ್ರಹಾಸನು ಹಸುಮಗು. ಅವನನ್ನು ಒಬ್ಬಳು ದಾಸಿ ಕುಂತಲ ದೇಶಕ್ಕೆ ಒಯ್ದಳು.

ಕುಂತಲ ರಾಜನಿಗೆ ಮಕ್ಕಳಿರಲಿಲ್ಲ. ಮಂತ್ರಿ ದುಷ್ಟಬುದ್ಧಿ ತನ್ನ ಮಗನೇ ರಾಜನಾಗಬೇಕೆಂದು ಆಶಿಸುತ್ತಿದ್ದನು. ಆದರೆ ಒಂದು ದಿನ. ಆಸ್ಥಾನದ ಜೋಯಿಸನು ಚಂದ್ರಹಾಸನನ್ನು ನೋಡಿ " ಈ ಹುಡುಗನು ರಾಜನಾಗುತ್ತಾನೆ ! " ಎಂದನು.





ಚಂದ್ರಹಾಸನು ಬದುಕಿದ್ದರೆ ತನ್ನ ಮಗನು ರಾಜನಾಗಲಾರನೆಂದು ದುಷ್ಟಬುದ್ಧಿ ಚಂದ್ರಹಾಸನನ್ನು ಕೊಲ್ಲಿಸಲು ಕಟುಕರನ್ನು ನಿಯಮಿಸಿದನು. ಆದರೆ ಆ ಹುಡುಗನನ್ನು ಕೊಲ್ಲಲು ಕಟುಕರಿಗೆ ಕೈಬಾರದೆ ಕಾಡಿನಲ್ಲಿ ಬಿಟ್ಟು ಹೋಗಿಬಿಟ್ಟರು.



ಕುಳಿಂದಕನೆಂಬ ರಾಜನು ಬೇಟೆಯಾಡಲು ಬಂದು, ಚಂದ್ರಹಾಸನನ್ನು ನೋಡಿ, ಮಕ್ಕಳಿಲ್ಲದವನಾದುದರಿಂದ, ಅವನನ್ನೇ ತನ್ನ ಮಗನಾಗಿ ಬೆಳೆಸ ತೊಡಗಿದನು. ಚಂದ್ರಹಾಸನು ಸಾಯಲಿಲ್ಲವೆಂದು ತಿಳಿದು ದುಷ್ಟಬುದ್ಧಿ ಅವನನ್ನು ತನ್ನ ಪರಿವಾರದಲ್ಲಿ ಇರಿಸಿಕೊಂಡನು.

ದುಷ್ಟಬುದ್ಧಿಯ ಮಗನಾದ ಮದನನು ಒಂದು ಪ್ರಾಂತಕ್ಕೆ ರಾಜ ಪ್ರತಿನಿಧಿಯಾಗಿದ್ದನು. ದುಷ್ಟಬುದ್ಧಿ ಒಂದು ಪತ್ರವನ್ನು ಬರೆದು, ಅದನ್ನು ಚಂದ್ರಹಾಸನ ಮೂಲಕ ಮದನನಿಗೆ ಕಳುಹಿಸಿದನು. ಚಂದ್ರಹಾಸನು ರಾಜಪ್ರತಿನಿಧಿಯ ಮನೆಯ ಆವರಣದೊಳಗೆ ಹೋಗಿ, ಬಳಲಿಕೆಯಿಂದ ಒಂದು ಮರದ ಕೆಳಗೆ ಮಲಗಿ ನಿದ್ರಿಸಿದನು.





ದುಷ್ಟಬುದ್ಧಿಯ ಮಗಳಾದ ವಿಷಯೆ ತನ್ನ ಅಣ್ಣನ ಮನೆಯಲ್ಲಿದ್ದಳು. ಅವಳು ನಿದ್ದೆಯಲ್ಲಿರುವ ಚಂದ್ರಹಾಸನನ್ನು ನೋಡಿ ಮೋಹಿಸಿ, ಅವನ ಹತ್ತಿರವಿದ್ದ ಪತ್ರವನ್ನು ತೆಗೆದು ಓದಿದಳು. ಅದರಲ್ಲಿ ಚಂದ್ರಹಾಸನಿಗೆ “ವಿಷ” ಕೊಡಬೇಕೆಂದು ಬರೆದಿದ್ದಿತು. ಅವಳು “ವಿಷ” ಎಂಬ ಮಾತನ್ನು “ವಿಷಯೆ” ಎಂದು ತಿದ್ದಿಟ್ಟಳು.

ತರುವಾಯ ಚಂದ್ರಹಾಸನು ಮದನನ ಬಳಿಗೆ ಹೋಗಿ ಪತ್ರವನ್ನು ಕೊಟ್ಟನು. ಅದರಲ್ಲಿ ಚಂದ್ರಹಾಸನಿಗೆ ವಿಷಯೆಯನ್ನು ಕೊಡಬೇಕೆಂದಿದ್ದುದರಿಂದ, ಮದನನು ಅವರಿಬ್ಬರಿಗೆ ಮದುವೆ ಮಾಡಿ ಮುಗಿಸಿದನು.





ತನ್ನ ಪಥಕವು ತಿರುಗಿ ಹೊಡೆದ ಸಂಗತಿ ದುಷ್ಟಬುದ್ಧಿಗೆ ತಿಳಿಯಿತು. ಚಂದ್ರಹಾಸನು ಸಾಯುವುದರ ಬದಲಾಗಿ ತನ್ನ ಅಳಿಯನಾಗಿ ಬಿಟ್ಟನಲ್ಲ! ಆದರೂ ಚಂದ್ರಹಾಸನನ್ನು ಕೊಲ್ಲುವ ಆಲೋಚನೆಯನ್ನು ದುಷ್ಟಬುದ್ಧಿ ಬಿಡಲಿಲ್ಲ.



ದುಷ್ಟಬುದ್ಧಿ ಚಂದ್ರಹಾಸನೊಂದಿಗೆ, "ಈ ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಚಂಡಿಕಾಲಯಕ್ಕೆ ಹೋಗಿ ದೇವಿಯನ್ನು ಪೂಜಿಸಿ ಬಾ. ಅದು ಎಲ್ಲಾ ಶುಭಗಳಿಗೂ ಅಗತ್ಯವಾದ ಮುಹೂರ್ತ ವೇಳೆ" ಎಂದನು. ತನ್ನ ತಂದೆ ಚಂದ್ರಹಾಸನೊಂದಿಗೆ ಹಾಗೆ ಹೇಳುವುದನ್ನು ಮದನನೂ ಕೇಳಿದನು.



ಅರ್ಧರಾತ್ರಿಯ ವೇಳೆಯಲ್ಲಿ ಚಂದ್ರಹಾಸನು ಹೊರಡಲಿರುವಾಗ ವಿಷಯೆಗೆ ಸಂದೇಹವಾಗಿ ಚಂಡಿಕಾಲಯಕ್ಕೆ ಹೋಗಬೇಡವೆಂದು ತಡೆದಳು. ಅವನಿಗೆ ಬದಲಾಗಿ ತಾನು ಹೋಗಿ ದೇವಿಯನ್ನು ಪೂಜಿಸಿ ಬರುವೆನೆಂದು ಹೇಳಿ ಮದನನು ಹೋದನು. ಆಲಯದಲ್ಲಿ ಕಾದಿದ್ದ ಹಂತಕರು ಮದನನ್ನು ಕೊಂದರು.



ತನ್ನ ಪ್ರಯತ್ನ ವಿಫಲವಾದುದು ಮಾತ್ರವಲ್ಲದೆ ತನ್ನ ಮಗನೇ ಸತ್ತುದನ್ನು ನೋಡಿ, ದುಷ್ಟಬುದ್ಧಿ ಎದೆಯೊಡೆದು ಸತ್ತುಹೋದನು.



ರಾಜನು ತನ್ನ ಮಗಳನ್ನು ಕೂಡಾ ಚಂದ್ರಹಾಸನಿಗೇ ಕೊಟ್ಟು ಮದುವೆ ಮಾಡಿದನು. ರಾಜನ ಆನಂತರ ಚಂದ್ರಹಾಸನೇ ರಾಜನಾಗಿ ಚಿರಕಾಲದ ವರೆಗೆ ದೊಡ್ಡ ರಾಜನೆಂದು ಖ್ಯಾತಿ ಪಡೆದನು.



# ಕುಮಾರಸ್ವಾಮಿ

ಮನ್ಮಥ ದಹನವಾಗಿ ಪಾರ್ವತಿಗೆ ಶಿವನೊಂದಿಗೆ ಮದುವೆಯಾದ ಮೇಲೆ, ಶಿವ ಪಾರ್ವತಿಯರು ಸಂತೋಷವಾಗಿರಲು, ಪಾರ್ವತಿ ಗರ್ಭಿಣಿಯಾಗಿ, ಅದನ್ನು ತಾಳಿಕೊಳ್ಳಲಾಗದೆ ಅಗ್ನಿಗೆ ಒಪ್ಪಿಸಿದಳು. ಅಗ್ನಿಯೂ ಅದನ್ನು ತಾಳಿಕೊಳ್ಳಲಾಗದೆ ಗಂಗೆಗೆ ಬದಲಾಯಿಸಿದನು. ಗಂಗಾನದಿ ಆ ಗರ್ಭವನ್ನು ತನ್ನ ದಡದಲ್ಲಿ ಬೆಳೆದ ಜೊಂಡು ಹುಲ್ಲುಗಳ ನಡುವೆ ಬಿಟ್ಟು ಬಿಟ್ಟಳು. ಅಲ್ಲಿಯೇ ಆ ಗರ್ಭ ಬೆಳೆದು ಕುಮಾರ ಸ್ವಾಮಿ ಹುಟ್ಟಿದನು.

ಹೀಗೆ ಜೊಂಡು ಹುಲ್ಲುಗಳ ನಡುವೆ ಹುಟ್ಟಿದ ಮಗುವಿಗೆ ಆರು ಮಂದಿ ಕೃತ್ತಿಕೆಯರು ಹಾಲೂಡಿ ಬೆಳೆಸಿದರು. ಆದುದರಿಂದ ಕುಮಾರಸ್ವಾಮಿ ಎಂಬ ಹೆಸರಿನ ಆ ಮಗುವಿಗೆ ಆರು ಮುಖಗಳೆಂದೂ, ಷಣ್ಮುಖನೆಂದೂ, ಕಾರ್ತಿಕೇಯನೆಂದೂ ಹೆಸರುಗಳುಂಟಾದುವು. ಸಪ್ತ ಮಹರ್ಷಿಗಳ ಹೆಂಡತಿಯರಾದ ಏಳುಮಂದಿಯಲ್ಲಿ ವಸಿಷ್ಠನ ಹೆಂಡತಿಯಾದ ಅರುಂಧತಿಯ ಹೊರತು, ಉಳಿದ ಆರುಮಂದಿ ಸ್ತ್ರೀಯರು ಹಾಲೂಡಿ ಬೆಳೆಸಿದರೆಂದು ಇನ್ನೊಂದು ಕಥೆ ಇದೆ. ಅವರೇ ಕೃತ್ತಿಕೆಯರೆಂದೂ ಹೇಳುತ್ತಾರೆ.

ಕುಮಾರಸ್ವಾಮಿ ಹುಟ್ಟಿದಾಗ ಅವನ ಸಮೀಪದಲ್ಲಿ ಶಿವನು ತ್ರಿಪುರಾಸುರನನ್ನು ಸಂಹರಿಸಿದ ಬಿಲ್ಲು ಇದ್ದಿತಂತೆ. ಕುಮಾರಸ್ವಾಮಿ ಅದರ ನಾರನ್ನು ಹಿಡಿದೆಳೆದಾಗ ದೊಡ್ಡ ಸಪ್ಪಳವಾಯಿತಂತೆ, ಆಗ ಎರಡು ದಿಗ್ಗಜಗಳು ಕುಮಾರಸ್ವಾಮಿಯ ಮೇಲೆ ಬಿದ್ದುವಂತೆ. ಆಗ ಆ ಹಸುಕಂದನು ನಗುತ್ತ ಆ ದಿಗ್ಗಜಗಳನ್ನು ಚೆಂಡಿನ ಹಾಗೆ ಹಾರಿಸಿ ಆಡುತ್ತಾ ಕೇಕೇ ಹಾಕಿದನಂತೆ.

ಬ್ರಹ್ಮನು ಕುಮಾರಸ್ವಾಮಿಯ ಬಳಿಗೆ ಬಂದು, ಪಾರ್ವತೀ ಪರಮೇಶ್ವರರನ್ನು ಅವನಿಗೆ ತೋರಿಸಿ "ಇವರೇ ನಿನ್ನ ತಾಯಿತಂದೆಯರು" ಎಂದು ಹೇಳಿದನು. ದೇವೇಂದ್ರನು ತನ್ನ ಐರಾವತದ ಎರಡು ಗಂಟೆಗಳನ್ನು ತಂದು ಕುಮಾರಸ್ವಾಮಿಗೆ ಬಹುಮಾನವಾಗಿ ಕೊಟ್ಟನು.

ಕುಮಾರಸ್ವಾಮಿ ಹುಟ್ಟಿ ಬೆಳೆಯುವಾಗ ಲೋಕವೆಲ್ಲಾ ಸಂಕ್ಷೋಭಗೊಂಡು ನಡುಗಿತು. ಅವನು ಕೈಕಾಲಾಡಿಸುವಾಗ ಪರ್ವತಗಳು ನಡುಗುತ್ತಿರಲು, ಮುನಿಗಳೂ, ದೇವತೆಗಳೂ ಹೆದರಿ ಇಂದ್ರನ ಬಳಿಗೆ ಓಡಿ, "ಈ ಕುಮಾರನು ನಿನ್ನನ್ನು ಸೋಲಿಸಿ

ಇಂದ್ರನಾಗುತ್ತಾನೆ. ಆದುದರಿಂದ ಅವನು ಬೆಳೆದು ದೊಡ್ಡವನಾಗುವುದಕ್ಕೆ ಮೊದಲೇ ಅವನನ್ನು ಕೊಂದು ಬಿಡು" ಎಂದು ಸಲಹೆ ಕೊಟ್ಟರು. ಇಂದ್ರನು ಸಪ್ತ ಮಾತೃಕೆಯರನ್ನು ಕರೆದು ಕುಮಾರಸ್ವಾಮಿಯನ್ನು ಕೊಂದು ಬರಲು ಹೇಳಿದನೆಂದೂ, ಅವರು ಹಾಗೆ ಮಾಡದೆ ಕುಮಾರಸ್ವಾಮಿಗೆ ತಾಯಿಗಳಾಗಿರಲು ಸಿದ್ಧರಾದರೆಂದೂ ಇನ್ನೊಂದು ಕಥೆಯಿದೆ. ಕುಮಾರ ಸ್ವಾಮಿ ಆ ತಾಯಂದಿರನ್ನು ಬಾಲಗ್ರಹಗಳನ್ನಾಗಿ ಮಾಡಿದನಂತೆ.

ಸಪ್ತ ಮಾತೃಕೆಯರಿಂದ ಕುಮಾರಸ್ವಾಮಿಯನ್ನು ಕೊಲ್ಲಿಸಲಾಗದೆ, ಇಂದ್ರನು ಅವನ ಮೇಲೆ ಯುದ್ಧಕ್ಕೆ ಬಂದು ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. ಅದು ಕುಮಾರನ ಬಲಭಾಗಕ್ಕೆ ತಗಲಿ, ಅದರಿಂದ ಮೇಕೆಯ ಮುಖವುಳ್ಳ ವೈಶಾಖನು ಹುಟ್ಟಿದನು. ವೈಶಾಖನ ಬೆನ್ನಿಗೇ ಅನೇಕ ಗಣಗಳೂ ಹುಟ್ಟಿದರು. ಈ ಬಗೆಯ ಕುಮಾರಗಣಗಳನ್ನು ನೋಡಿ ಇಂದ್ರನು ಹೆದರಿ ಕುಮಾರಸ್ವಾಮಿಗೇ ಶರಣು ಬಂದನು.

"ನಿನಗೇನು ಬೇಕು ?" ಎಂದು ಕುಮಾರಸ್ವಾಮಿ ಇಂದ್ರನನ್ನು ಕೇಳಿದನು. "ನೀನು ನನ್ನೊಂದಿಗೆ ಸ್ನೇಹವಾಗಿರಬೇಕು. ನನ್ನ ಇಂದ್ರಪದವಿಯನ್ನು ನೀನೇ ತೆಗೆದುಕೋ" ಎಂದನು ಇಂದ್ರ. "ನನಗೆ ನಿನ್ನ ಇಂದ್ರಪದವಿಯ ಅಗತ್ಯವಿಲ್ಲ." ಎಂದನು ಕುಮಾರಸ್ವಾಮಿ. "ಹಾಗಾದರೆ ದೇವತೆಗಳಿಗೆ ನೀನೇ ಸೇನಾನಾಯಕನಾಗಿರಬೇಕು" ಎಂದು ಇಂದ್ರನು ಕೇಳಿಕೊಂಡನು.

ಆ ರೀತಿಯಾಗಿ ದೇವಸೇನಾನಾಯಕನಾದ ಕುಮಾರ ಸ್ವಾಮಿ ಅನೇಕಮಂದಿ ರಾಕ್ಷಸರನ್ನು ಕೊಂದನು. ಅವರಲ್ಲಿ ಶೂರಪದ್ಮಾಸುರ ಅಂಧಕಾಸುರ ಮೊದ ಲಾದವರು ಪ್ರಮುಖ ದೈತ್ಯರು. ರಾಕ್ಷಸರ ಮುಖ್ಯ ಸ್ಥಾವರವಾಗಿದ್ದ ಕ್ರೌಂಚ ಪರ್ವತವನ್ನು ಕುಮಾರ ಸ್ವಾಮಿ ಭೇದಿಸಿದನು.

ಎಲ್ಲಕ್ಕಿಂತಲೂ ಕುಮಾರಸ್ವಾಮಿ ಸಾಧಿಸಿದ ದೊಡ್ಡ ವಿಜಯವೆಂದರೆ ತಾರಕಾಸುರನನ್ನು ಸಂಹಾರ ಮಾಡಿದುದು. ತಾರಕಾಸುರನು ಬ್ರಹ್ಮನಿಂದ ವರ ಗಳನ್ನು ಪಡೆದು ಇಂದ್ರನನ್ನು ಗಡಗಡ ನಡುಗಿಸಿದನು. ಬ್ರಹ್ಮನಿಂದಲೂ ದೇವತೆಗಳನ್ನು ಕಾಪಾಡಲಾಗಲಿಲ್ಲ. ತಾರಕಾಸುರನ ಪ್ರತಾಪವು ಕುಮಾರಸ್ವಾಮಿಯ ಜನನಕ್ಕೆ ಮೊದಲೇ ಹರಡಿಕೊಂಡಿತ್ತು. ತಾರಕಾ ಸುರನು ಬ್ರಹ್ಮನನ್ನು ಮೆಚ್ಚಿಸಿ ಸಹಜವಾಗಿ ಹುಟ್ಟಿದ ವರಾರಿಂದಲೂ ತನಗೆ ಮರಣಬಾರದಂತೆ ವರಪಡೆದು, ಲೋಕಕಂಟಕನಾಗಿದ್ದನು. ಬ್ರಹ್ಮನ ವರಕ್ಕೆ ಭಂಗಬಾರ ದಂತೆ ಅವನನ್ನು ಕೊಲ್ಲಲಿಕ್ಕಾಗಿಯೇ ಕುಮಾರ ಸ್ವಾಮಿಯ ಜನ್ಮವು ವಿಚಿತ್ರ ರೀತಿಯಲ್ಲಿ ಆಯಿತು. ಕುಮಾರಸ್ವಾಮಿ ಎಲ್ಲೆಲ್ಲಿಯೂ ಪೂಜೆಗೊಳ್ಳುತ್ತಿದ್ದಾನೆ.





# ಭಯ ಅಂದರೆ?

ಹಿಂದೆ ಒಂದಾನೊಂದು ಕಾಡಿನ ನಡುವಿನಲ್ಲಿ ಒಂದು ಕೊಳವಿತ್ತು. ಆ ಕೊಳದ ಬದಿಯಲ್ಲಿ ಚಿಕ್ಕದೊಂದು ಮನೆ ಇದ್ದಿತು. ಆ ಮನೆಯಲ್ಲಿ ಒಬ್ಬಳು ಬಡ ಹೆಂಗುಸು ವಾಸ ಮಾಡಿಕೊಂಡಿದ್ದಳು.

ಅವಳ ಗಂಡನು ಬೇಟೆಗೆ ಹೋದರೆ ಹಿಂದಿರುಗಿ ಯಾವಾಗ ಬರುವನೋ ಹೇಳುವಂತಿಲ್ಲ. ಅವಳು ತನಗಿರುವ ಒಬ್ಬನೇ ಮಗನೊಂದಿಗೆ ಧೈರ್ಯವಾಗಿ ಇರುತ್ತಿದ್ದಳು, ಎಲ್ಲಾ ಮೃಗಗಳಿಗೂ ಆ ತಾಯಿ ಮಗಂದಿರ ಪರಿಚಯವಿದ್ದುದರಿಂದ ಏನೂ ಭಯ ವಿರಲಿಲ್ಲ. ಅವಳ ಮಗನ ಹೆಸರು ಸುಮಂತ, ಅವನ ಮೇಲೆ ತಾಯಿಗೆ ಅಪಾರ ಮಮತೆ, ತುಂಬಾ ಮುದ್ದು.

ಒಂದು ದಿನ ರಾತ್ರಿ ಸುಮಂತನೂ ತಾಯಿಯೂ ಆ ಚಿಕ್ಕ ಮನೆಯಲ್ಲಿ ನಿದ್ದೆ ಮಾಡಿಕೊಂಡಿದ್ದರು. ಗಂಡನು ಬೇಟೆಗೆ ಹೋಗಿದ್ದನು. ಆಗ ಮಳೆಗಾಲ. ಇದ್ದಕ್ಕಿದ್ದ ಹಾಗೇ ಗಾಳೀ ಮಳೆ ಮಿಂಚು ಸಿಡಿಲು ಎಲ್ಲವೂ ಪ್ರಾರಂಭವಾಗಿಬಿಟ್ಟಿತು.

ಆ ಶಬ್ದಗಳಿಂದ ಮೊದಲು ತಾಯಿಗೆ ಎಚ್ಚರ ವಾಯಿತು. ಅವಳು ಮಗನನ್ನು ನಿದ್ದೆಯಿಂದ ಎಬ್ಬಿಸಿದಳು. "ಅಬ್ಬ! ಏನು ಮಿಂಚು! ಎಂಥ ಗಾಳಿ! ಸುಮಂತೂ! ನನಗೆ ಭಯವಾಗುತ್ತದೆ. ಆ ಕಿಟಿಕಿ ಬಾಗಿಲು ಮುಚ್ಚಿ ಬಾಪ್ಪ" ಅಂದಳು ತಾಯಿ.

ಸುಮಂತನು ತಾಯಿಯ ಮಾತು ಕೇಳಿ ಸುತ್ತ ಮುತ್ತಲೂ ನೋಡಿದನು. ತಾಯಿಯ ಬಾಯಿ ಯಿಂದ ಹೊರಟ 'ಭಯ' ಎಂಬ ಮಾತನ್ನು ಅವನು ಕೇಳುವುದು ಇದೇ ಮೊದಲನೇ ಸಾರಿ. ಅಂತಲೇ ಅವನು "ಕಿಟಿಕಿ ಮುಚ್ಚುತ್ತೇನೆ. ಭಯವಾಗಿದೆ ಅಂದೆ ಯಲ್ಲಾ? ಎಲ್ಲಿದೆ ಭಯ? ಹೇಗಿರುತ್ತೆ ಅದು? ಕಿಟಿಕಿಯಿಂದ ಒಳಗೆ ಬರುತ್ತೆಯೆ? ಬಂದರೆ ಏನು ಮಾಡುತ್ತೆ?" ಎಂದು ಕೇಳಿದನು.

ತಾಯಿ ಮಗನ ಪ್ರಶ್ನೆಗೆ ಉತ್ತರವೇನೂ ಕೊಡದೆ ಮುಗುಳು ನಕ್ಕು, "ನಿನ್ನ ಪ್ರಶ್ನೆಯೂ ಆಯಿತು, ನೀನೂ ಆಯಿತು. ಕಿಟಿಕಿ ಮುಚ್ಚಿ ಮಲಗು ಸ್ವಸ್ಥ" ಎಂದು ಹೇಳಿ ತಾನೂ ಕಂಬಳಿ ಮುಸುಕೆಳೆದುಕೊಂಡು ಮಲಗಿದಳು.

ಸುಮಂತನಿಗೆ ತೃಪ್ತಿಯಾಗಲಿಲ್ಲ. ಆ ಭಯವನ್ನು ನೋಡಬೇಕೆಂಬ ಕುತೂಹಲದಲ್ಲಿ ಅವನಿಗೆ ನಿದ್ದೆಯೂ ಬರಲಿಲ್ಲ. ಮೆಲ್ಲನೆ ಎದ್ದು ಬಾಗಿಲು ಮುಚ್ಚಿದನು. ಆಗ ಗಾಳಿ ನಿಂತರೂ ಮಳೆ ಜಿನುಗುತ್ತಿತ್ತು. ಅವನು

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಕತ್ತಲೆಯಲ್ಲೇ ಕಾಡಿನೊಳಗೆ ತಡಕಾಡುತ್ತ, "ಎಲ್ಲಿದ್ದೀಯಾ ಭಯಾ! ಹೇಗಿದ್ದೀ?" ಎಂದು ಕೂಗತೊಡಗಿದನು. "ಭಯಾ! ಭಯಾ! ಓ ಭಯಾ!" ಎಂದು ಕರೆಯುತ್ತ ಹೋಗುತ್ತಿದ್ದನು.

"ಬಾರಪ್ಪಾ! ನನ್ನ ಪುಣ್ಯ! ಆ ಉಯ್ಯಾಲೆ ಎಟಕದೆ ಯಾರು ಬರುವರೋ ಅಂತ ನೋಡುತ್ತಿದ್ದೇನೆ. ಇಲ್ಲಿ ಬಾರೋ! ನೀನು ಸ್ವಲ್ಪ ನನ್ನನ್ನು ನಿನ್ನ ಹೆಗಲ ಮೇಲೆ ನಿಲ್ಲಿಸಿಕೋ. ನಾನು ಉಯ್ಯಾಲೆಯಲ್ಲಿರುವ ನನ್ನ ಕಂದನನ್ನು ಎತ್ತಿಕೊಳ್ಳುತ್ತೇನೆ" ಎಂಬ ಮಾತು ಅವನಿಗೆ ಕೇಳಿಸಿದುವು.

ಸುಮಂತನು ಆ ಶಬ್ದವು ಬರುವ ಕಡೆ ಕಡೆಗೆ ಓಡಿದ. ಅಲ್ಲಿದ್ದ ಒಂದು ಹಳೇಕಾಲದ ಮನೆಯೊಳಗೆ ಒಬ್ಬಳು ಹೆಂಗುಸು ನಿಂತಿದ್ದಳು. ಅವಳ ಮುಂದೆ ಅಟ್ಟದ ತೊಲೆಯಲ್ಲಿ ಉಯ್ಯಾಲೆ ನೇತಾಡುತ್ತಿದ್ದಿತು. ಅದರೊಳಗಿನಿಂದ ಮಗುವಿನ ಅಳುವ ಶಬ್ದ ಕೇಳುತ್ತಿದ್ದಿತು. ನಿಜಕ್ಕೂ ಅವಳು ಮಾನವ ಸ್ತ್ರೀಯಾಗಿರಲಿಲ್ಲ.

ಆ ಸಂಗತಿ ಅರಿಯದ ಸುಮಂತನು ಅವಳನ್ನು ತನ್ನ ಹೆಗಲ ಮೇಲೆ ಏರಲು ಬಿಟ್ಟನು. ಆ ರಾಕ್ಷಸಿ ಸುಮಂತನನ್ನು ತನ್ನ ಕಾಲುಗಳಿಂದ ಹಿಚಿಕಿ ಕೊಲ್ಲಬೇಕೆಂದು ಪ್ರಯತ್ನಿಸಿದಳು.

ಆಗ ಸುಮಂತನಿಗೆ ಕೋಪ ಬಂದುದರಿಂದ ಕೈಗಳಿಂದ ಅವಳ ತಲೆ ಗೂದಲನ್ನು ಹಿಡಿದೆಳೆದನು. ಅದರಿಂದ ಅಯ ತಪ್ಪಿ ಕೆಳಗೆ ಬಿದ್ದು ಆ ರಾಕ್ಷಸಿಯ ಎರಡು ಕೋರೆಹಲ್ಲುಗಳು ಮುರಿದು ಹೋದುವು. ಅವಳು ಕುಯ್ಯೋಮುಯ್ಯೋ ಕೂಗುತ್ತ ಅಲ್ಲಿಂದ ಓಡಿ ಹೋದಳು.

ಸುಮಂತನು ಆ ಮನೆಯಿಂದ ಹೊರಗೆ ಬಂದು ತಿರುಗಿ ನೋಡಿದನು. ಅಲ್ಲಿ ಮನೆಯೂ ಇರಲಿಲ್ಲ. ಉಯ್ಯಾಲೆಯೂ ಇಲ್ಲ, ಮಗುವೂ ಇಲ್ಲ. ಬರೀ ಕಾಡು. ಸುಮಂತನಿಗೆ ಆಶ್ಚರ್ಯವಾಯಿತು. ಅಷ್ಟು ಹೊತ್ತಿಗೆ ರಾತ್ರಿ ಹೋಗಿ ಸೂರ್ಯೋದಯವಾಗಿತ್ತು. ಮಳೆ ಪೂರ್ತಿ ನಿಂತು ಕಾಡು ಶಾಂತವಾಗಿತ್ತು. ಸುಮಂತನು ಭಯುವನ್ನು ಹುಡುಕುತ್ತಾ ಸಾಗಿದನು.

ಒಂದು ಕಡೆಯಲ್ಲಿ ಬೆಟ್ಟದ ಕಲ್ಲಿನ ಮೇಲೆ ಕುಳಿತ್ತಿದ್ದ ಕೆಲ ಮಂದಿ ಕಳ್ಳರು ಸುಮಂತನನ್ನು ನೋಡಿದರು. ಅವರಲ್ಲಿ ಒಬ್ಬನು, "ಯಾರೋ ನೀನು? ಇಲ್ಲಿಗೆ ಹಕ್ಕಿ ಕೂಡಾ ಹಾರಲು ಹೆದರುತ್ತದೆ. ರಾಜನ ಸೈನ್ಯಕ್ಕೂ ಇಲ್ಲಿಗೆ ಬರಲು ಭಯವಾಗುತ್ತದೆ. ನೀನೇನೋ ಸ್ವಲ್ಪವೂ ಹೆದರದೆ ಇಲ್ಲಿಗೆ ಬಂದೆಯಲ್ಲಾ? ಏನು ಧೈರ್ಯ ನಿನಗೆ? ಯಾಕೋ ಬಂದಿ ಇಲ್ಲಿಗೆ?" ಎಂದು ಕೇಳಿದರು.

"ಅದೇ ಹೇಳಿದಿರಲ್ಲಾ? ಭಯಾ ಅಂತ? ಅದು ನಿಮ್ಮ ಹತ್ತಿರ ಇದೆಯೇನು? ಅದನ್ನು ಹುಡುಕಿಕೊಂಡೇ ಬಂದೆ. ಎಲ್ಲಿದೆ? ತೋರಿಸಿರಿ" ಎಂದನು ಸುಮಂತ.

ಅವನ ಮಾತು ಕೇಳಿ ಕಳ್ಳರಿಗೆ ನಗುಬಂದಿತು. ಅವರು ಅವನನ್ನು ಕರೆದು ಒಂದು ಮಣೆಯನ್ನೂ

ಲಟ್ಟಣಿಕೆಯನ್ನೂ, ಗೋದಿಹಿಟ್ಟನ್ನೂ ಸುಮಂತನಿಗೆ ಕೊಟ್ಟು, "ಅಕೋ, ಆ ಮರಗಳ ಗುಂಪಿನಾಚೆಗಿರುವ ಸ್ಮಶಾನಕ್ಕೆ ಹೋಗಿ ಈ ಹಿಟ್ಟಿನಿಂದ ರೊಟ್ಟಿ ಲಟ್ಟಿಸಿ ಅಲ್ಲಿಯ ಬೆಂಕಿಯಲ್ಲಿ ಸುಟ್ಟು ತೆಗೆದುಕೊಂಡು ಬಾ. ಭಯ ಅಂದರೆ ಏನೂಂತ ತನ್ನಂತೆ ಗೊತ್ತಾಗುತ್ತೆ. ಚೆನ್ನಾಗಿ ನೋಡಿಕೋ" ಎಂದರು.

ಸರಿಯೆಂದು ಸುಮಂತನು ಸ್ಮಶಾನಕ್ಕೆ ಹೋಗಿ, ಹಿಟ್ಟು ಕಲಸಿ ರೊಟ್ಟಿ ಲಟ್ಟಿಸಿ. ಕಲ್ಲೊಲೆ ಮಾಡಿ, ಶವಸುಡುವ ಬೆಂಕಿಯಿಂದ ಒಲೆ ಹೊತ್ತಿಸಿ ರೊಟ್ಟಿಯನ್ನು ಕಾಯಿಸ ತೊಡಗಿದನು.

ಆಗ ಪಕ್ಕದಲ್ಲಿದ್ದ ಸಮಾಧಿಯಿಂದ ಒಂದು ಕೈ ಅಷ್ಟುದ್ದಕ್ಕೆ ಚಾಚಿ "ಹುಡುಗಾ! ನನಗೊಂದು ರೊಟ್ಟಿ ಕೊಡಪ್ಪಾ, ರುಚಿ ನೋಡುತ್ತೇನೆ" ಎಂದಿತು ವಿಕಾರ ಸ್ವರದಿಂದ.

ಕೆಲಸದಲ್ಲೇ ಮಗ್ನನಾಗಿದ್ದ ಸುಮಂತನು ಸಿಟ್ಟಿನಿಂದ "ನಿನಗೆ ರೊಟ್ಟಿ ರುಚಿ ತೋರಿಸಬೇಕೇ? ನಿನ್ನಪ್ಪ ಮಾಡಿದ ಹಿಟ್ಟೋ ಇದು!" ಎನ್ನುತ್ತ ಲಟ್ಟಣಿಗೆಯಿಂದ ಆ ಕೈಗೆ ಒಂದೇಟು ಕೊಟ್ಟನು. ಆ ಕೂಡಲೇ "ಹಾಯ್ಯೋ!" ಎಂದು ಕೂಗಿ ಕೈ ಸಮಾಧಿಯೊಳಗೆ ಮಾಯವಾಯಿತು.

ಎಲ್ಲಾ ಹಿಟ್ಟನ್ನೂ ರೊಟ್ಟಿ ಸುಟ್ಟಾದ ಮೇಲೆ ಸುಮಂತನು ಅವುಗಳನ್ನು ತಂದು ಕಳ್ಳರಿಗೆ ಕೊಟ್ಟು ನಡೆದ ಸಂಗತಿಯನ್ನು ಹೇಳಿದನು. ಕಳ್ಳರಿಗೆ ಸುಮಂತನ ನಿರ್ಭಯತೆಯನ್ನು ನೋಡಿ ದಿಗಿಲಾಯಿತು.

"ನೀನು ಸಾಮಾನ್ಯನಲ್ಲಪ್ಪ. ನಿನಗೆ ಭಯವನ್ನು ತೋರಿಸುವ ಕೆಲಸ ನಮ್ಮಿಂದಾಗದು. ಇಲ್ಲಿಂದ ಬೇಗನೇ ಹೋಗಿಬಿಡು. ನಿನ್ನ ಪುಣ್ಯ! ನಮ್ಮ ಸುದ್ದಿ ಯಾರಿಗೂ ಹೇಳಿಬಿಡಬೇಡ. ನಾವು ಸ್ವಲ್ಪ ಕಾಲ ಹೀಗೆಯೇ ಇರುತ್ತೇವೆ. ನಿನಗೆ ದೊಡ್ಡ ನಮಸ್ಕಾರವಪ್ಪಾ!" ಎಂದರು ಕಳ್ಳರು.



ಸುಮಂತನು ಅಲ್ಲಿಂದ ಸ್ವಲ್ಪ ದೂರ ಹೋದಾಗ ಒಬ್ಬಳು ಮುದುಕಿ ಅವನಿಗೆ ಇದಿರಾದಳು. "ಏತಕ್ಕೆ ಹುಡುಗಾ ಒಬ್ಬನೇ ಈ ಕಾಡಿನಲ್ಲಿ ತಿರುಗಾಡುವೇ? ಯಾವ ಊರಿನವನು? ಏನು ಕೆಲಸ ಇಲ್ಲಿ? ಏನನ್ನೋ ಹುಡುಕುವೆಯಲ್ಲಾ? ಏನಾಯಿತಪ್ಪಾ?" ಎಂದು ಆ ಮುದುಕಿ ಕೇಳಿದಳು.

ಸುಮಂತನು ತನ್ನ ಸಂಗತಿಯನ್ನೆಲ್ಲಾ ಅವಳೊಂದಿಗೆ ಹೇಳಿ, "ಅವ್ವಾ, ಆ ಭಯ ಎಂಬುದು ಹೇಗಿರುವುದೋ ನೋಡಬೇಕೆಂದು ಹುಡುಕುತ್ತಾ ಇದ್ದೇನೆ. ಇನ್ನೂ ಸಿಗಲಿಲ್ಲ. ಅದು ಇರುವ ಜಾಗ ನಿನಗಾದರೂ ಗೊತ್ತಿದೆಯೆ?" ಎಂದನು.

ಅವ್ವ ಅವನ ಮಾತಿಗೆ ನಗುತ್ತ, "ನಿನ್ನ ಹಾಗೆಯೇ ನನಗೊಬ್ಬಳು ಮೊಮ್ಮಗಳಿದ್ದಾಳೆ. ಬಾ. ಅವಳು ನಿನ್ನ ಆಶೆ ನೆರವೇರಿಸುತ್ತಾಳೋ ನೋಡುವ. ಅವಳು ಎಂತೆಂತಹುದನ್ನೋ ಹುಡುಕಿ ಹಿಡಿದಿದ್ದಾಳೆ. ಅವಳಿಂದ ನಿನ್ನ ಆಶೆ ನೆರವೇರಬಹುದು. ಬಾಪ್ಪ ನನ್ನ

ಹಿಂದೆ" ಎಂದಳು. ಸುಮಂತನು ಅವ್ವಳೊಂದಿಗೆ ಹೋದನು. ಕಾಡಿನ ಕೊನೆಯಲ್ಲಿಯೇ ಅವ್ವಳ ಮನೆ. ಅವಳ ಮೊಮ್ಮಗಳು ತುಂಬಾ ಗಟ್ಟಿಗಿತ್ತಿ. ಅವಳು ಸುಮಂತನ ಸಮಾಚಾರವನ್ನೆಲ್ಲಾ ಕೇಳಿ, "ಓ! ಅದರ ಸಂಗತಿ ನನಗ್ಗೊತ್ತು. ಸಮಯಬರಲಿ, ತೋರಿಸುತ್ತೇನೆ" ಎಂದಳು.

ಸ್ವಲ್ಪ ಹೊತ್ತಿನ ಮೇಲೆ ಅವ್ವನ ಮೊಮ್ಮಗಳು ಸುಮಂತನಿಗೆ ಊಟ ಬಡಿಸಿದಳು. ಸುಮಂತನು ಅನ್ನ ಕಲಸಿ ಮೊದಲನೇ ತುತ್ತನ್ನು ಬಾಯಿಗಿಡುವುದರೊಳಗೆ ಅವ್ವನ ಮೊಮ್ಮಗಳು, "ತಡಿತಡಿ. ಅದರೊಂದಿಗೆ ಈ ಪಲ್ಯವನ್ನೂ ಬಡಿಸಿಕೋ. ಈಗ ಬಂದೆ" ಎಂದು ಒಂದು ಮುಚ್ಚಳದ ಪಾತ್ರತಂದು ಅವನ ಬದಿಯಲ್ಲಿಟ್ಟು, ಅವಸರವಾಗಿ ಒಳಕ್ಕೆ ಓಡಿದಳು, ಮತ್ತೇನೋ ತರುವವಳಂತೆ.

ಸುಮಂತನು ಆ ಪಾತ್ರದ ಮುಚ್ಚಳ ತೆಗೆದನು. ಆಗ ಅದರೊಳಗಿನಿಂದ ಟಪಟಪ ಶಬ್ದವಾಯಿತು. ಅದರ ಬೆನ್ನಿಗೇ ಗುಬ್ಬಚ್ಚಿಯೊಂದು ತುರ್ರನೆ ಹೊರಗೆ ಹಾರಿಹೋಯಿತು.

ಸುಮಂತನು ಹೆದರಿ "ಆ" ಎಂದು ಹಿಂದೆ ಒರಗಿದನು. ಭಯವೆಂದರೇನೆಂದು ಅರಿಯದ ಸುಮಂತನು ಆ ಗುಬ್ಬಿ ಹಾರಿದ ಕಡೆಗೇ ದೊಡ್ಡ ಕಣ್ಣುಗಳಿಂದ ನೋಡ ತೊಡಗಿದನು. ಹಾಗೆ ಹಾರಿಹೋದುದು ಏನೆಂದೇ ಅವನಿಗೆ ಅರ್ಥವಾಗಲಿಲ್ಲ. ಅವ್ವನೂ ಮೊಮ್ಮಗಳೂ ನಗುತ್ತ, "ಈಗ ಗೊತ್ತಾಯಿತೇ ಭಯವೆಂದರೆ ಹೇಗಿದೆಯೋ ಅಂತ?" ಎಂದು ಕೇಳಿದರು.

"ಇದೇನಾ ಭಯವೆಂದರೆ? ಫಕ್ಕನೆ ಹಾರಿ ಹೋಗುವಂಥಾದ್ದೇನಾ? ಗೊತ್ತಾಯಿತು. ಇನ್ನು ನಾನು ಅಮ್ಮನ ಬಳಿಗೆ ಹೋಗುತ್ತೇನೆ. ನೀವಿಬ್ಬರೂ ನಮ್ಮ ಮನೆಗೆ ಬಂದರೆ ಅಮ್ಮನಿಗೆ ಬಹಳ ಸಂತೋಷವಾಗುತ್ತೆ" ಎಂದನು ಸುಮಂತ.

ಗಂಡುಸರ ಸಹಾಯವಿಲ್ಲದ ಅವ್ವಾ ಮೊಮ್ಮಗಳೂ ಸುಮಂತನ ಮನೆಗೆ ಹೋದರು. ಮಗನನ್ನೂ ಅವನೊಂದಿಗೆ ಬಂದವರನ್ನೂ ನೋಡಿ ಆ ತಾಯಿಗೆ ಸಂತೋಷವಾಯಿತು. ಎಲ್ಲರೂ ಒಂದೇ ಕುಟುಂಬದವರಂತೆ ಅಲ್ಲೇ ಇದ್ದರು.

ಮತ್ತೆ ಮೂರು ದಿನಗಳಲ್ಲಿ ಬೇಟೆಗೆ ಹೋಗಿದ್ದ ಸುಮಂತನ ತಂದೆ, ಭರ್ಜರಿ ಬೇಟೆಯೊಂದಿಗೆ ಹಿಂದಿರುಗಿ ಮನೆಗೆ ಬಂದನು. ಮನೆಯಲ್ಲಿಯ ಕಲಕಲ ನೋಡಿ ಆಶ್ಚರ್ಯಪಟ್ಟನು. ಎಲ್ಲಾ ಸಂಗತಿ ತಿಳಿದು ಸಂತೋಷವಾಯಿತು ಅವನಿಗೆ. ಮುಂದೆ ಸುಮಂತನಿಗೆ ಅವ್ವನ ಮೊಮ್ಮಗಳೊಂದಿಗೆ ಮದುವೆಯೂ ಆಯಿತು. ಸುಮಂತನು ಗಟ್ಟಿಗಿತ್ತಿಯಾದ ಹೆಂಡತಿಯೊಂದಿಗೆ ಸುಖವಾಗಿದ್ದನು.





# ರಾಜನ ನೆನಪು

ಪೂರ್ವಕಾಲದಲ್ಲಿ ಮಗಧರಾಜ್ಯವನ್ನು ಚಂದ್ರಸೇನ ನೆಂಬರಾಜನು ಪಾಲಿಸುತ್ತಿದ್ದನು. ಆ ಮಹಾರಾಜನು ತನ್ನ ಮಂತ್ರಿಯನ್ನು, ಛದ್ಮ ವೇಷದಿಂದ ಪ್ರಜೆಗಳ ನಡುವಿಗೆ ಹೋಗಿ ಅವರು ತನ್ನನ್ನು ಕುರಿತು ಏನು ಮಾತಾಡಿಕೊಳ್ಳುವರೆಂಬುದನ್ನು ತಿಳಿದು ಬರಲು ಕಳುಹಿಸುತ್ತಿದ್ದನು. ಆ ಪ್ರಕಾರ ತಿರುಗಾಡಿ ಬಂದ ಮಂತ್ರಿ ರಾಜನೊಂದಿಗೆ "ಪ್ರಜೆಗಳು ನಿಮ್ಮನ್ನು ತುಂಬಾ ಹೊಗಳುತ್ತಾರೆ ಪ್ರಭುಗಳೇ" ಎಂದು ಹೇಳುವನು. ಅದನ್ನು ಕೇಳಿ ತನ್ನ ಪ್ರಜೆಗಳು ಸುಖಿವಾಗಿರುವರೆಂದು ರಾಜನು ಅಂದುಕೊಳ್ಳುವನು.

ಈ ಪದ್ಧತಿಯಲ್ಲಿ ರಾಜ್ಯಭಾರ ನಿರ್ವಹಿಸಿಕೊಂಡಿದ್ದ ಚಂದ್ರಸೇನನು ಅಕಸ್ಮಾತ್ತಾಗಿ ತೀರಿ ಹೋಗಿ, ಅವನ ಮಗ ಇಂದುವರ್ಮನು ಪಟ್ಟಕ್ಕೆ ಬಂದು ರಾಜ್ಯ ಪಾಲನೆಯನ್ನು ಕೈ ಕೊಂಡನು. ಅವನು ಕೂಡಾ ಪ್ರಜೆಗಳ ಅಭಿಪ್ರಾಯ ತಿಳಿಯಲು ಮಂತ್ರಿಯನ್ನು ಮಾರು ವೇಷದಿಂದ ಪ್ರಜೆಗಳ ನಡುವಿಗೆ ಕಳುಹಿಸ ತೊಡಗಿದನು.

ಮುಂಚಿನ ದಿನ ಪ್ರಜೆಗಳ ನಡುವೆ ಹೋದ ಆ ಮಂತ್ರಿ ಮಾರಣೇ ದಿನ ರಾಜನ ಬಳಿಗೆ ಬಂದು, "ಮಹಾರಾಜರೇ, ನಮ್ಮ ರಾಜ್ಯದ ದಕ್ಷಿಣದಲ್ಲಿರುವ ವಿಕ್ರಮಪುರಿಯ ಪ್ರಜೆಗಳು ಯಾವಾಗಲೂ ನಿಮ್ಮನ್ನು ಕುರಿತು ಮಾತಾಡಿಕೊಳ್ಳುತ್ತಾರೆ." ಎಂದು ಹೇಳಿದನು.

ಅದರ ಮರುದಿನ ಇಂದುವರ್ಮನು ತಾನೇ ವೇಷ ಬದಲಾಯಿಸಿಕೊಂಡು ವಿಕ್ರಮಪುರಿಗೆ ಹೊರಟನು. ಅಲ್ಲಿಗೆ ಹೋಗಿ ಸೇರಲು ಒಳ್ಳೆಯ ಮಾರ್ಗವಿಲ್ಲದೆ ರಾಜನು ಬಹಳ ಕಷ್ಟಪಡಬೇಕಾಯಿತು. ಅವನು ಕೂಡಲೇ ವಿಕ್ರಮಪುರಿಗೆ ಒಳ್ಳೆಯ ರಹದಾರಿಯನ್ನು ಹಾಕಿಸಿದನು. ದಾರಿಯ ಇಬ್ಬದಿಗಳಲ್ಲಿಯೂ ನೆರಳು ಕೊಡುವ ಸಾಲು ಮರಗಳನ್ನೂ, ಒಳ್ಳೆಯ ನೀರಿನ ಬಾವಿಗಳನ್ನೂ, ವಿಶ್ರಾಂತಿ ಮಂಟಪಗಳನ್ನೂ ಏರ್ಪಡಿಸಿದನು.

ಇದಾಗಿ ಕೆಲವು ತಿಂಗಳ ಮೇಲೆ ಇಂದುವರ್ಮನು ಮತ್ತೊಂದು ಸಾರಿ ಪ್ರಜೆಗಳ ಅಭಿಪ್ರಾಯ ತಿಳಿದು ಕೊಂಡು ಬರಲು ಮಂತ್ರಿಯನ್ನು ಕಳುಹಿಸಿದನು. ಮಂತ್ರಿ ಮಾರುವೇಷದಲ್ಲಿ ದೇಶದೊಳಗೆ ತಿರುಗಾಡಿ ಬಂದು "ಮಹಾರಾಜರೇ, ಅವಂತೀಪುರದ ಪ್ರಜೆಗಳು ಬಹಳ ಅಭಿಮಾನದಿಂದ ನಿಮ್ಮನ್ನು ಕುರಿತು ಮಾತಾಡಿಕೊಳ್ಳುತ್ತಿದ್ದಾರೆ" ಎಂದನು.

ರಾಂಬಾಬು

ಅದನ್ನು ಕೇಳಿರಾಜನು ಮತ್ತೊಂದು ಸಾರಿ ವೇಷ ಮರೆಯಿಸಿಕೊಂಡು ಅವಂತೀಪುರಕ್ಕೆ ಹೋದನು. ಅಲ್ಲಿಯ ಪ್ರಜೆಗಳಿಗೆ ಸಾಕಾಗುವಷ್ಟು ನೀರಿನ ಸೌಕರ್ಯ ವಿಲ್ಲವೆಂದು ರಾಜನಿಗೆ ಗೊತ್ತಾಯಿತು. ಒಳ್ಳೆಯ ನೀರಿಗಾಗಿ ಪ್ರಜೆಗಳು ಬಹುದೂರ ಹೋಗಬೇಕಾಗು ತ್ತಿತ್ತು. ಅಷ್ಟು ತಿಳಿದ ಮೇಲೆ ರಾಜನು ಅವಂತಿಪುರ ದಲ್ಲಿ ಅನೇಕ ಕೆರೆಗಳನ್ನೂ ಬಾವಿಗಳನ್ನೂ ತೋಡಿಸಿ ಎಲ್ಲರಿಗೂ ಸುಲಭವಾಗಿ ನೀರು ಸಿಗುವಂತೆ ಮಾಡಿದನು.

ಮತ್ತೆ ಸ್ವಲ್ಪಕಾಲ ಕಳೆಯಿತು. ಇಂದುವರ್ಮ ರಾಜನು ತನ್ನ ಮಂತ್ರಿಯನ್ನು ಇನ್ನೊಂದುಸಾರಿ ಮಾರುವೇಷದಲ್ಲಿ ಪ್ರಜೆಗಳ ನಡುವಿಗೆ ಕಳುಹಿಸಿದನು. ಮಂತ್ರಿ ದೇಶದಲ್ಲೆಲ್ಲಾ ತಿರುಗಾಡಿ ಬಂದು, "ಮಹಾ ರಾಜರೆ, ಕಾಂಚನಪುರದ ಹೊರತು ರಾಜ್ಯದಲ್ಲಿ ಬೇರೆಲ್ಲಿಯೂ ಯಾರೂ ತಮ್ಮ ಹೆಸರು ಹೇಳುವು ದಿಲ್ಲ" ಎಂದನು.

ಇಂದುವರ್ಮನು ಬೇರೆ ವೇಷ ಹಾಕಿಕೊಂಡು ಕಾಂಚನಪುರಕ್ಕೆ ಹೋದನು. ಅಲ್ಲಿಯ ಪ್ರಜೆಗಳಿಗಿರುವ ತೊಂದರೆ ಏನೆಂಬುದು ಅವನಿಗೆ ಗೊತ್ತಾಯಿತು. ಕಾಂಚನಪುರದ ಸಮೀಪದಲ್ಲಿ ದೊಡ್ಡ ಸಂತೆ ನಡೆಯು ತ್ತದೆ. ಅಲ್ಲಿಗೆ ಹೋಗಬೇಕಾದರೆ ದೊಡ್ಡದೊಂದು ನದಿಯನ್ನು ದಾಟಬೇಕು. ಆ ನದಿಗೆ ಸಂಕವಿಲ್ಲದ್ದರಿಂದ ಜನರಿಗೆ ಬಹಳ ಕಷ್ಟವಾಗಿದೆ. ಕೂಡಲೇ ರಾಜನು ಕೆಲಸವನ್ನು ಪ್ರಾರಂಭಮಾಡಿಸಿ, ಕಾಂಚನಪುರದ ಸಂತೆಗೆ ಹೋಗಿಬರಲು ನದಿಗೆ ಬಲವಾದ ಸಂಕ ಕಟ್ಟಿಸಿದನು.

ಅನಂತರ ಸ್ವಲ್ಪಕಾಲದ ಮೇಲೆ ಇಂದುವರ್ಮನು ತನ್ನ ಮಂತ್ರಿಯನ್ನು ವೇಷಮರೆಸಿಕೊಂಡು ಹೋಗಿ ಪ್ರಜೆಗಳ ಅಭಿಪ್ರಾಯ ತಿಳಿದುಬರಲು ಕಳುಹಿಸಿದನು.

ಈಸಾರಿ ಮಂತ್ರಿ ಹಿಂದಿರುಗಿಬಂದು ಬಹಳ ಆಂದೋಳನೆಯ ಭಾವದಲ್ಲಿ, "ಮಹಾರಾಜರೇ, ದೇಶ ದಲ್ಲಿ ಯಾವ ಮೂಲೆಯಲ್ಲಿಯೂ ಯಾರೂ ತಮ್ಮನ್ನು ಕುರಿತು ಮಾತಾಡುವುದೇ ಇಲ್ಲ." ಎಂದು ಹೇಳಿದನು.

ಆ ಮಾತಿಗೆ ಇಂದುವರ್ಮನು ನಗಾಡುತ್ತ, "ಮಂತ್ರೀ, ಇದು ತುಂಬಾ ಒಳ್ಳೆಯ ಲಕ್ಷಣವಾಗಿದೆ. ನನ್ನನ್ನು ಕುರಿತು ಯಾರೂ ಮಾತಾಡುವುದಿಲ್ಲವೆಂದರೆ ನನ್ನಿಂದ ಪ್ರಜೆಗಳಿಗೆ ಏನೂ ಆಗಬೇಕಾಗಿಲ್ಲವೆಂದೇ ಅರ್ಥ. ಅವರೆಲ್ಲ ಸುಖವಾಗಿದ್ದಾರೆ. ಪ್ರಜೆಗಳು ಏನು ಬೇಕಾದರೂ ರಾಜನನ್ನೇ ನಂಬುತ್ತಾರೆ. ಪ್ರಸ್ತುತದಲ್ಲಿ ಅವರಿಗೆ ರಾಜನ ಮೇಲೆ ಒಳ್ಳೆಯ ಅಭಿಪ್ರಾಯವಿದೆ ಯೆಂದಾಯಿತು. ಬಯಕೆಗಳಿರುವ ಮನುಷ್ಯರು ದೇವರನ್ನು ನೆನೆಯುವ ಹಾಗೆಯೇ ಪುರಜನರು ರಾಜ ನನ್ನು ನೆನೆದುಕೊಳ್ಳುತ್ತಾರೆ. ರಾಜನನ್ನೂ ದೇವನನ್ನೂ ಮರೆತ ಪ್ರಜೆಗಳಿಗೆ ಯಾವ ಕೊರತೆಯೂ ಇಲ್ಲವೆಂದೇ ಆಗುತ್ತದೆ. ನನ್ನ ತಂದೆಗೆ ಈ ರಹಸ್ಯವು ಗೊತ್ತಿರಲಿಲ್ಲ" ಎಂದು ಮಂತ್ರಿಗೆ ಸಮಾಧಾನ ಹೇಳಿದನು,





# ನಂಬುಗೆ

ಹಿಂದೆ ಗವೀಪುರ ಎಂಬೊಂದು ಗ್ರಾಮವಿದ್ದಿತು. ಅಲ್ಲಿ ರಾಮಶಾಸ್ತ್ರಿ ಎಂಬ ವೈದ್ಯನೊಬ್ಬನಿದ್ದನು. ಆತನ ಕೈ ಗುಣವು ಬಹಳ ಒಳ್ಳೆಯದೆಂದು ಎಲ್ಲರೂ ಹೇಳುತ್ತಿದ್ದರು. ಯಾರಾದರೂ ಆತನ ಇದಿರಿನಲ್ಲಿ ಹೊಗಳುತ್ತ, "ನೀವು ಸಾಧಾರಣ ಮನುಷ್ಯರಲ್ಲ. ಅಪರ ಧನ್ವಂತರಿಗಳು. ನಿಮ್ಮ ಕೈ ತಗಲಿದರೇ ಸಾಕು; ಎಂತಹ ರೋಗವಾದರೂ ಹೇಳ ಹೆಸರಿಲ್ಲದೆ ಓಡಿ ಬಿಡುತ್ತದೆ!" ಎಂದರೆ, ರಾಮಶಾಸ್ತ್ರಿ "ನನ್ನಲ್ಲಿ ಅಂತಹ ವಿಶೇಷವೇನೂ ಇಲ್ಲಯ್ಯ. ನನ್ನನ್ನು ಮೀರಿಸುವಂತಹ ವೈದ್ಯರು ಸುತ್ತಲೂ ಎಷ್ಟೋ ಮಂದಿ ಇದ್ದಾರೆ. ನಿಮಗೆ ನನ್ನ ಮೇಲಿರುವ ನಂಬುಗೆಯ ಗುರಿಯಿಂದಲೇ ರೋಗ ಮಾಯವಾಗುತ್ತದೆ" ಎನ್ನುವನು.

ಅವನು ಹೀಗೆ ಹೇಳುವುದರಿಂದ ಬಹಳ ವಿನಯಶಾಲಿಯೆಂದೂ ಗರ್ವವಿಲ್ಲದವನೆಂದೂ ಅವನ ಹೆಸರು ಇನ್ನಷ್ಟು ದೊಡ್ಡದೇ ಆಯಿತು. "ಧನ್ವಂತರಿಯ ಹಸ್ತವಾಸಿ ಪಡೆದವನಾದರೂ ಸ್ವಲ್ಪ ಕೂಡಾ ಹೆಮ್ಮೆಯಿಲ್ಲ" ಎಂದು ಎಲ್ಲರೂ ಅವನನ್ನು ತುಂಬಾ ಮೆಚ್ಚುತ್ತಿದ್ದರು.

ಹೀಗಿರುವಾಗ ಒಂದುದಿನ ಸ್ವಯಂ ರಾಮಶಾಸ್ತ್ರಿಗೇ ಹೊಟ್ಟೇ ನೋವೂ ವಾಂತಿಯೂ ಶುರುವಾಯಿತು. ಅದನ್ನು ತಿಳಿದು ಅನೇಕ ಮಂದಿ ಬಂದು ಆತನನ್ನು ನೋಡಿ, ಬಗೆಬಗೆಯಾಗಿ ಸಲಹೆ ಮಾಡ ತೊಡಗಿದರು. ಕೆಲವರು ಅವನಿಗೆ ತಮಗೆ ತಿಳಿದ ಔಷಧವನ್ನು ಹೇಳಿದರು. ಮತ್ತೆ ಕೆಲವರು, "ಮಹಾ ವೈದ್ಯರಾದ ನಿಮಗೆ ಇನ್ನೊಬ್ಬರ ವೈದ್ಯವೇತಕ್ಕೆ? ನಿಮ್ಮ ಮೂಲಿಕೆಯ ಸಂಚಿಯಿಂದ ಯಾವ ಔಷಧ ತೆಗೆಯಬೇಕೆನ್ನುವಿರಿ ಹೇಳಿರಿ. ತೆಗೆದುಕೊಡುತ್ತೇವೆ" ಎಂದರು. ಇನ್ನೂ ಕೆಲವರು ಪಕ್ಕದ ಊರಿನಲ್ಲಿ ಹೇರಂಬ ಶಾಸ್ತ್ರಿಗಳೆಂಬ ವೈದ್ಯರಿದ್ದಾರಲ್ಲ, ಅವರನ್ನು ಕರೆದು ತಂದರೆ ಚೆನ್ನಾಗಿರುತ್ತೆ" ಎಂದರು. ವೈದ್ಯನು ಸಂಕಟ ಪಡುವಾಗ ಅವನಿಗೆ ಸಲಹೆ ಮಾಡುವುದೊಂದು ತಮಾಷೆಯಾಗಿಯೂ ಇರುತ್ತದೆ ಎಲ್ಲರಿಗೂ.

ಹೇರಂಬಶಾಸ್ತ್ರಿಯ ಹೆಸರು ಕೇಳುತ್ತಲೇ ರಾಮಶಾಸ್ತ್ರಿಗೆ ಜೀವ ಚೇತರಿಸಿಕೊಂಡ ಹಾಗಾಯಿತು. ಆತನು ದೊಡ್ಡ ವೈದ್ಯನೆಂದು ನಂಬುವವರಲ್ಲಿ ಹೇರಂಬಶಾಸ್ತ್ರಿಯೊಬ್ಬನಾಗಿದ್ದನು. ಆದುದರಿಂದ ರಾಮಶಾಸ್ತ್ರಿ ಊರವರ ಸಹಾಯದಿಂದ ಒಂದು

ಷೇಕ್‌ಗಾಲಿಬ್

ಗಾಡಿಮಾಡಿಸಿ, ಹೇರಂಬಶಾಸ್ತ್ರಿ ಇರುವ ಗ್ರಾಮಕ್ಕೆ ಹೋದನು. ಅಲ್ಲಿ ನಿರಾಶೆಯೇ ಕಾದಿತ್ತು.

ಹೇರಂಬಶಾಸ್ತ್ರಿಯ ಮನೆಗೆ ಹೋದಾಗ, ಬಾಗಿಲಿಗೆ ಬೀಗ ಹಾಕಲ್ಪಟ್ಟಿದ್ದಿತು. ಹೇರಂಬಶಾಸ್ತ್ರಿಯನ್ನು ನಾಯಿಯೊಂದು ಕಚ್ಚಿತಂತೆ. ಆದುದರಿಂದ ಆತನು ಅದಕ್ಕೆ ಔಷಧ ಹಾಕಿಸಿಕೊಳ್ಳಲು ಗವೀಪುರದಲ್ಲೇ ಇದ್ದ ಮರುಳಯ್ಯನೆಂಬ ವೈದ್ಯನ ಬಳಿಗೆ ಹೋಗಿರುವನಂತೆ.

"ಹೇರಂಬಶಾಸ್ತ್ರಿಗೆ ಮರುಳಯ್ಯ ವೈದ್ಯನ ಮೇಲೆ ಅಷ್ಟು ನಂಬುಗೆ ಇದ್ದರೆ ನಾನು ಕೂಡಾ ಮರಳಯ್ಯನ ಬಳಿಗೇ ಹೋಗಿ ಚಿಕಿತ್ಸೆ ಪಡೆಯುತ್ತೇನೆ. ಹೇರಂಬಶಾಸ್ತ್ರಿಗೆ ಉಪಯೋಗ ಬೀಳುವ ವೈದ್ಯನು ನನಗೇಕೆ ಉಪಯೋಗವಾಗಲಾರನು?" ಎಂದುಕೊಂಡು ರಾಮಶಾಸ್ತ್ರಿ ಮತ್ತೆ ತನ್ನ ಊರಿಗೇ ಹಿಂದಿರುಗಿದನು.

ಮರುಳಯ್ಯ ವೈದ್ಯನ ಮನೆಯ ವರೆಗೂ ಗಾಡಿ ಹೋಗುವಂತಿರಲಿಲ್ಲ. ಅಂತಲೇ ಸ್ವಲ್ಪ ದೂರದಲ್ಲೇ ರಾಮಶಾಸ್ತ್ರಿ ಗಾಡಿಯಿಂದಿಳಿದು, ತನಗೆ ಸಹಾಯಕರಾಗಿ ಬಂದವರೊಂದಿಗೆ ಕಾಲು ದಾರಿಯಲ್ಲಿ ನಡೆಯುತ್ತ ಮರುಳಯ್ಯನ ಮನೆಯನ್ನು ತಲಪಿದನು.

ಆಗ ಮನೆಯೊಳಗಿನಿಂದ ರೋದನ ಧ್ವನಿ ಕೇಳಿ ಬರುತ್ತಿದ್ದಿತು. ಮನೆಯ ಸುತ್ತಲೂ ಜನರು ಕೂಡಿದ್ದರು. ಆ ಜನರಲ್ಲಿ ಹೇರಂಬ ಶಾಸ್ತ್ರಿಕೂಡಾ ಇರುವುದನ್ನು ರಾಮಶಾಸ್ತ್ರಿ ನೋಡಿದನು.

ರಾಮಶಾಸ್ತ್ರಿ ಆತನೊಂದಿಗೆ, "ಏನಾಯಿತು? ಮರುಳಯ್ಯ ವೈದ್ಯನ ಹತ್ತಿರ ಚಿಕಿತ್ಸೆ ಪಡೆಯುವ ಯಾವನಾದರೂ ರೋಗಿ ತೀರಿ ಗೀರಿ ಹೋದನೋ?" ಎಂದು ವಿಚಾರಿಸಿದನು.

ಹೇರಂಬ ಶಾಸ್ತ್ರಿಗೆ ರಾಮಶಾಸ್ತ್ರಿಯ ಪರಿಚಯ ವಿರಲಿಲ್ಲ. ಅವನು ರಾಮಶಾಸ್ತ್ರಿಯ ಮಾತಿಗೆ "ಬೇರೆ ಯಾರೂ ಅಲ್ಲ. ಸ್ವತಃ ಮರುಳಯ್ಯನೇ ತೀರಿಹೋದನು. ಅವನಿಗೆ ಕಳೆದ ರಾತ್ರಿಯಿಂದ ವಾಂತೀ ಭೇದಿ ಶುರುವಾಯಿತಂತೆ. ಅವನು ಎಲ್ಲರ ರೋಗಗಳಿಗೂ ಮಂತ್ರ ವೈದ್ಯ ಮಾಡುವನಾದರೂ ತನ್ನ ಮಂತ್ರದಲ್ಲಿ ತನಗೇ ನಂಬುಗೆಯಿಲ್ಲದೆ ಹೋಯಿತು. ಯಾರೋ ರಾಮ ಶಾಸ್ತ್ರಿಯಂತೆ. ಆತನ ಹತ್ತಿರ ಚಿಕಿತ್ಸೆ ಪಡೆಯ ಬೇಕೆಂದು ಹೊರಟನಂತೆ. ಆಗಲೇ ತುಂಬಾ ತಡವಾಗಿ ಹೋಯಿತು. ದಾರಿಯಲ್ಲೇ ಪ್ರಾಣಬಿಟ್ಟನು ಪಾಪ." ಎಂದನು.

ರಾಮ ಶಾಸ್ತ್ರಿ ತನ್ನೊಂದಿಗೆ ಬಂದವರನ್ನು ನೋಡಿ, "ಹೋಗೋಣ. ನನ್ನ ರೋಗಕ್ಕೆ ನಾನೇ ಔಷಧ ಮಾಡಿ ಕೊಳ್ಳುತ್ತೇನೆ. ಈಗಷ್ಟೇ ನನ್ನಲ್ಲಿ ನನಗೆ ನಂಬುಗೆ ಬಂತು." ಎಂದು ಅಲ್ಲಿಂದ ಹಿಂದಿರುಗಿದನು.



# ರತ್ನಪರೀಕ್ಷಕ

ಸುಲೋಚನನೆಂಬವನು ರತ್ನಪರೀಕ್ಷೆಯಲ್ಲಿ ನಿಪುಣ. ಅವನ ಮನೆಯ ನೆರೆಯಲ್ಲಿಯೇ ಒಬ್ಬ ಸಾಹುಕಾರನಿದ್ದನು. ರಂಗನೆಂಬ ಬಡವನೊಬ್ಬನು ದಿನಾ ಆ ಸಾಹುಕಾರನ ಮನೆಗೆ ಹೋಗುತ್ತಾ, ಬರುತ್ತಾ ಇರುವುದನ್ನು ಸುಲೋಚನನು ನೋಡಿ, ಒಂದು ದಿನ ಏನು ಸಮಾಚಾರವೆಂದು ಅವನನ್ನು ಕೇಳಿದನು. ರಂಗನು ಸರಳ ಗುಣದವೆಂದೂ, ಸಾಹುಕಾರನು ವಕ್ರಬುದ್ಧಿಯವನೆಂದೂ ಸುಲೋಚನನಿಗೆ ಗೊತ್ತು.

"ದಿನಾ ನಾನು ಸಂಪಾದಿಸುವ ಹಣದಲ್ಲಿ ಸ್ವಲ್ಪ ಸ್ವಲ್ಪ ಆ ಸಾಹುಕಾರನ ಹತ್ತಿರ ಭದ್ರಪಡಿಸುತ್ತೇನೆ. ನನ್ನ ಹತ್ತಿರವಿದ್ದರೆ ಖರ್ಚಾಗಿ ಹೋಗುತ್ತದೆ. ಈಗ ನನ್ನ ಮಗಳಿಗೆ ಸಂಬಂಧವು ಕೂಡಿಬಂದಿದೆ. ಬರುವವಾರ ನನ್ನ ಹಣವನ್ನೆಲ್ಲ ವಾಪಸು ಪಡೆಯುತ್ತೇನೆ" ಎಂದನು ರಂಗ.

ಸಾಹುಕಾರನು ರಂಗನನ್ನು ಮೋಸಪಡಿಸುವನೆಂದು ಸುಲೋಚನನು ಊಹಿಸಿ ರಂಗನಿಗೆ ಒಂದು ಆಲೋಚನೆ ಹೇಳಿದನು. ರಂಗನು ಅದರಂತೆ ನಾಲ್ಕು ಸಣ್ಣ ಸಣ್ಣ ಹೊಳೆಯುವ ಹರಳುಗಳನ್ನು ಸಾಹುಕಾರನ ಹತ್ತಿರ ಕೊಟ್ಟು ಭದ್ರವಾಗಿಡಲು ಹೇಳಿದನು.

ಸಾಹುಕಾರನು ಅವುಗಳನ್ನು ತಂದು ಸುಲೋಚನನಿಗೆ ತೋರಿಸಿ, ಪರೀಕ್ಷಿಸುವಂತೆ ಕೇಳಿಕೊಂಡನು. ಸುಲೋಚನನು ಅವುಗಳನ್ನು ಬಹಳ ಹೊತ್ತು ಪರೀಕ್ಷಿಸಿ, "ಮೂಲ ರತ್ನಗಳು. ಸಾಣೆ ಹಿಡಿಸ ಬೇಕಷ್ಟೆ. ಒಂದೊಂದು ಐದಾರು ಸಾವಿರ ಬೆಲೆಯದು" ಎಂದನು.

ಆ ಮೇಲೆ ಸುಲೋಚನನು ರಂಗನೊಂದಿಗೆ, "ಈಗ ಹೋಗಿ ಸಾಹುಕಾರನ ಹತ್ತಿರದಿಂದ ನಿನ್ನ ಹಣ ಕೇಳಿ ಪಡೆದುಕೊ" ಎಂದನು. ಸಾಹುಕಾರನು ರಂಗನಿಗೆ ಅವನ ಹಣವನ್ನು ಕೊಟ್ಟು, ಮತ್ತೆನೋ ನಾಲ್ಕು ಹರಳುಗಳನ್ನು ಸಹಾ ಕೊಟ್ಟು ಕಳುಹಿಸಿ, ಮೊದಲು ರಂಗನು ಕೊಟ್ಟ ಹರಳುಗಳನ್ನು ಸುಲೋಚನನಿಗೆ ತೋರಿಸಿ, ಸಾಣೆ ಹಿಡಿದು ಕೊಡಲು ಹೇಳಿದನು.

"ಇವು ರತ್ನಗಳಲ್ಲ, ಗಾಜಿನ ಹರಳುಗಳೇ. ನಿಮ್ಮಂಥ ಸಾಹುಕಾರರು ಇಂಥಾದ್ದನ್ನು ಸಂಪಾದಿಸಿದ್ದು ನೋಡಿ, ಸುಮ್ಮನೆ ತಮಾಷೆಗೆ ಹಾಗಂದೆ. ಯಾರು ಕೊಟ್ಟರು ನಿಮಗೆ ಈ ಮೂರು ಕಾಸಿನ ವಜ್ರವನ್ನು ?" ಎಂದನು ಸುಲೋಚನ. ಸಾಹುಕಾರನ ಮುಖ ಬಿಳುಚಿಕೊಂಡಿತು.





# ಸುಂದರಪತ್ನಿ

ಒಂದು ಊರಿನಲ್ಲಿ ರಾಮ ಮತ್ತು ಕೃಷ್ಣ ಎಂಬವರು ಚಿಕ್ಕತನದಿಂದಲೂ ಕೂಡಾಡಿ ಒಂದೇ ಶಾಲೆಯಲ್ಲಿ ವಿದ್ಯೆ ಕಲಿತು ಅಚ್ಚುಮೆಚ್ಚಿನ ಸ್ನೇಹಿತರಾದರು. ದೊಡ್ಡವರಾದ ಮೇಲೆ ತಮ್ಮ ಊರಿನಲ್ಲಿ ಮನೆ ಮಾರು ನೋಡಿಕೊಳ್ಳುತ್ತ ಇರತೊಡಗಿದರು. ಅವರಿಗೆ ಯಾವ ಪ್ರಶ್ನೆಗಳಿದ್ದರೂ ಇನ್ನೊಬ್ಬನೊಡನೆ ಹೇಳಿ ಚರ್ಚಿಸಿ ಕೆಲಸ ಮಾಡುತ್ತಿದ್ದರು.

ಅವರೊಳಗೆ ರಾಮನು ಸೌಂದರ್ಯ ಪಿಪಾಸಿಯಾಗಿದ್ದನು. ಅವನು ಅಂದಚೆಂದವಾದ ವಸ್ತುಗಳನ್ನೇ ಬಳಸಿಕೊಳ್ಳುವನು. ಯಾವಾಗಲೂ ಅಂದವಾದ ಬಟ್ಟೆಬರೆಗಳನ್ನೇ ಧರಿಸುವನು. ತನ್ನ ಸುತ್ತಲೂ ಅಂದವಿರಬೇಕೆಂದು ಬಯಸುತ್ತಿದ್ದನು. ಅಂತೆಯೇ ಸುಂದರಿಯಾದ ಹೆಂಡತಿಯನ್ನೇ ಮಾಡಿಕೊಳ್ಳಬೇಕೆಂದು ಆಶೆಪಡುತ್ತಿದ್ದನು.

ಒಂದು ದಿನ ಆಕಸ್ಮಿಕವಾಗಿ ರಾಮನ ತಂದೆಗೆ ಎದೆ ನೋವು ಎದ್ದಿತು. ಅವನು ಸಾಯುವ ಮೊದಲು ತನ್ನ ಮಗನನ್ನು ಕರೆದು, ತನ್ನ ಸೋದರಸೊಸೆಯನ್ನು ಮದುವೆ ಮಾಡಿಕೊಳ್ಳುವಂತೆ ಅವನಿಂದ ಮಾತು ಪಡೆದು ಶಾಶ್ವತವಾಗಿ ಕಣ್ಣು ಮುಚ್ಚಿದನು.

ತಂದೆ ಹೇಳಿದ ಅವನ ಸೋದರತ್ತೆಯ ಮಗಳು ರುಕ್ಮಿಣಿ ಎಣ್ಣೆಗಪ್ಪಿನವಳಾಗಿ ಮನೆವಾರ್ತೆಗಳಲ್ಲಿ ಪಳಗಿದವಳಾಗಿದ್ದಳು. ಆದರೆ ತಂದೆಗೆ ಅಂತ್ಯಕಾಲದಲ್ಲಿ ಕೊಟ್ಟ ಮಾತಿನ ಕಾರಣದಿಂದಾಗಿ, ಕೃಷ್ಣನೂ ತಂದೆಯ ಮಾತನ್ನು ಮೀರಬಾರದೆಂದು ಪ್ರೋತ್ಸಾಹಿಸಲು, ರಾಮನು ಇಷ್ಟವಿಲ್ಲದಿದ್ದರೂ ರುಕ್ಮಿಣಿಯನ್ನೇ ಮದುವೆಯಾಗಲು ಒಪ್ಪಿದನು.

ರುಕ್ಮಿಣಿ ಚಿಕ್ಕಂದಿನಿಂದಲೂ ಕಷ್ಟಗಳಲ್ಲೇ ಬೆಳೆದು ತುಂಬಾ ಸಹನೆಯನ್ನೂ, ವಿಧೇಯತೆಯನ್ನೂ ಮೈಗೂಡಿಸಿಕೊಂಡು ಎಲ್ಲಾ ಕೆಲಸಗಳನ್ನೂ ಚೊಕ್ಕಟವಾಗಿ ಮಾಡುವಳು. ಗಂಡನ ಮನೆಗೆ ಬಂದ ಮೇಲೆಯೂ ಅವಳು ಐದಾರು ಮಂದಿ ಕೆಲಸದಾಳುಗಳಿಗೆ ಸಮವಾಗಿದ್ದು ಮನೆಗೆಲಸಗಳನ್ನು ಜಾಣತನದಿಂದ ನೆರವೇರಿಸುತ್ತಿದ್ದಳು. ರಾಮನು ಬೆಳಗ್ಗೆ ನಿದ್ದೆಯಿಂದೇಳುವಾಗ, ಮನೆಯನ್ನು ಕನ್ನಡಿಯ ಹಾಗೆ ಶುದ್ಧಪಡಿಸಿ, ಸ್ನಾನ ಮುಗಿಸಿ ಗಂಡನನ್ನು ಎಬ್ಬಿಸುವಳು.

ಇಷ್ಟೆಲ್ಲಾ ಇದ್ದರೂ ರಾಮನಿಗೆ ತನ್ನ ಹೆಂಡತಿಯ ಮೇಲೆ ಒಳ್ಳೆಯ ಅಭಿಪ್ರಾಯ ಮೂಡಿರಲಿಲ್ಲ. ಸುಂದರಿಯಾದ ಹೆಂಡತಿಯನ್ನು ಮಾಡಿಕೊಳ್ಳಲಾರದೆ

ಮುರಳೀಧರ

ಹೋದೆನಲ್ಲಾ ಎಂದು ನೆನೆಯುತ್ತ, ತನ್ನ ದುರದೃಷ್ಟವನ್ನು ಕುರಿತು ನೊಂದುಕೊಳ್ಳುತ್ತಲೇ ಇದ್ದನು.

ಹೀಗಿರುವಾಗ ಒಂದು ದಿನ ಕೃಷ್ಣನು ರಾಮನ ಬಳಿಗೆ ಬಂದು, ತನಗೆ ಒಂದು ಸಂಬಂಧ ಬಂದಿದೆಯೆಂದೂ. ಹುಡುಗಿ ನೋಡಲು ತನ್ನೊಂದಿಗೆ ರಾಮನೂ ಬರಬೇಕೆಂದೂ ಕೇಳಿಕೊಂಡನು. ರಾಮನು ಅದಕ್ಕೆ ಒಪ್ಪಿ, ಕೃಷ್ಣನಿಗೆ ತನ್ನ ಮನೆಯಲ್ಲೇ ಊಟಕ್ಕಿರಲು ಹೇಳಿ, ಅವನಿಗೂ ಸೇರಿ ಅಡಿಗೆಮಾಡುವಂತೆ ಹೆಂಡತಿಗೆ ಹೇಳಿದನು. ಅನಂತರ ಸೊಗಸಾದ ಊಟಮಾಡಿಸಿ, ಅವನೊಂದಿಗೆ ಹುಡುಗಿ ನೋಡಲು ಹೊರಟನು.

ವಧುವಾದ ಪಾರ್ವತಿ ತುಂಬಾ ಚೆಲುವೆಯಾಗಿದ್ದಳು. ಸೌಂದರ್ಯ ಪಿಪಾಸಿಯಾದ ರಾಮನು ಅವಳ ಮೇಲೆ ನೆಟ್ಟ ಕಣ್ಣನ್ನು ಹಿಂದೆಗೆಯಲಾಗದೆ ಹೋದನು.

ಅವಳೊಂದಿಗೆ ಕೃಷ್ಣನ ಮದುವೆಯ ಸಂಬಂಧವು ನಿಶ್ಚಯವಾಯಿತು. ಎಲ್ಲ ಮಾತುಗಳೂ ಕೂಡಿಬಂದುವು. ರಾಮನು ತನ್ನ ಸ್ನೇಹಿತನಾದ ಕೃಷ್ಣನನ್ನು ಬಾಯಿಯಿಂದ ಅಭಿನಂದಿಸಿದನಾದರೂ ಅವನ ಭಾಗ್ಯವನ್ನು ನೆನೆದು ಒಳಗೊಳಗೆ ತುಂಬಾ ಈರ್ಷ್ಯೆಯನ್ನು ತುಂಬಿಕೊಂಡಿದ್ದನು.

ಪಾರ್ವತಿಯಂತಹ ಸುಂದರಿ ತನ್ನ ಮಿತ್ರನ ಪತ್ನಿಯಾದಂದಿನಿಂದಲೂ ರಾಮನಿಗೆ ತನ್ನ ಹೆಂಡತಿಯಾದ ರುಕ್ಮಿಣಿಯ ಮೇಲೆ ಪೂರ್ತಿ ವಿಮುಖತೆಯುಂಟಾಯಿತು. ಅವಳು ತನಗೆ ಶ್ರದ್ಧೆಯಿಂದ ಮಾಡುವ ಸೇವೆಗಳಿಗೆ ಅವಳ ಮೇಲೆ ಕೃತಜ್ಞತೆ ಕೂಡಾ ಅವನಿಗಿಲ್ಲದೆ ಹೋಯಿತು.

ಕೃಷ್ಣನು ಗೃಹಸ್ಥನಾದ ಕೆಲವು ದಿನಗಳ ಮೇಲೆ, ರಾಮನು ತನ್ನ ಮಿತ್ರನ ಸಂಸಾರ ಹೇಗಿದೆಯೋ ನೋಡಬೇಕೆಂಬ ಕುತೂಹಲದಿಂದ ಒಂದು ದಿನ ಅವನ ಮನೆಗೆ ಹೋದನು.

ಹೊತ್ತೇರಿ ಬಿಸಿಲಿಗೆ ಬಿಸಿ ಮುಟ್ಟಿದ ವೇಳೆಯಾದರೂ ಅಂಗಳ ಜಗಲಿ ಚಾವಡಿಗಳಲ್ಲಿ ಇನ್ನೂ ಕಸಪೊರಕೆಯಾಡಿಸಿರಲಿಲ್ಲ. ಹಾಗಿರಲು ಸೆಗಣಿ ಬಳಿದು ರಂಗೋಲೆ ಹಾಕುವುದೆಲ್ಲಿ ಬಂತು? ರಾಮನು



ಆಶ್ಚರ್ಯಪಡುತ್ತ ಬಾಗಿಲು ತಟ್ಟಿದನು. ಕೃಷ್ಣನು ಬಂದು ಬಾಗಿಲು ತೆರೆದು ತನ್ನ ಸ್ನೇಹಿತನನ್ನು ನೋಡಿ ಒಳಕ್ಕೆ ಆಹ್ವಾನಿಸಿದನು. ಆದರೆ ಕೃಷ್ಣನ ಮುಖದಲ್ಲಿ ಆನಂದವು ತಾಂಡವಿಸುವಂತೆ ರಾಮನಿಗೆ ಕಾಣಲಿಲ್ಲ.

ಅಷ್ಟರಲ್ಲಿ ಪಾರ್ವತಿ ಆ ಕಡೆಗೆ ಬಂದಳು. ಅವಳನ್ನು ನೋಡಿ ರಾಮನಿಗೆ ಏನೇನೋ ತೋರಿತು. ಅವಳು ಕೆದರಿದ ತಲೆ ಕೂದಲಿಂದ, ಜಿಗುಟು ಮುಖದಿಂದ, ನಿದ್ದೆಗಣ್ಣಿನಿಂದ ಆಗ ತಾನೇ ನಿದ್ದೆಯಿಂದೆದ್ದು ಬಂದವಳಂತಿದ್ದಳು. ಅವಳು ರಾಮನ ಕಡೆಗೆ ನಿರ್ಲಕ್ಷ್ಯವಾಗಿ ನೋಡಿ, ಗಂಡನನ್ನು ಒಳಗೆ ಬರುವಂತೆ ಸನ್ನೆ ಮಾಡಿದಳು.

"ಈಗಲೇ ಬರುತ್ತೇನೆ ಕುಳಿತುಕೋ" ಎಂದು ಹೇಳಿ ಕೃಷ್ಣನು ಒಳಗೆ ಹೋದನು. ರಾಮನು ಮುಳ್ಳಿನ ಮೇಲೆ ಕುಳಿತವನಂತಿದ್ದು, ಒಳಗೆ ಕೃಷ್ಣನು ಹೆಂಡತಿಯೊಂದಿಗೆ ಏನೋ ರಹಸ್ಯವಾಗಿ ಹೇಳುತ್ತಿದ್ದಾನೆಂದು ಗ್ರಹಿಸಿದನು.

ಕೃಷ್ಣನ ಮಾತು ಕೇಳಿಸದಿದ್ದರೂ, ಪಾರ್ವತಿಗೆ ಮೆಲ್ಲ ಮಾತಾಡಲು ಬರುತ್ತಿದ್ದಿಲ್ಲವೇನೋ! ಅವಳು ಹೇಳಿದ ಮಾತು ರಾಮನ ಕಿವಿಗೆಬಿತ್ತು. "ಯಾರು ಯಾರೋ ಮನೆಗೆ ಬಂದರೆ ಅವರಿಗೆಲ್ಲಾ ಉಪಚಾರ ಮಾಡಿ ಬೇಸಿ ಹಾಕಲಿಕ್ಕೆ ಇದೇನು ಸತ್ರವೇ? ಅಲ್ಲದೆ ಊರೊಳಗೇ ಇರುವವರಿಗೆ ನಮ್ಮಲ್ಲಿ ಊಟವೇಕೇಂತ? ಸುಮ್ಮನಿರೋದುಬಿಟ್ಟು—?"

ಇಷ್ಟು ಕೇಳಿದ ಮೇಲೆ ರಾಮನು ಎದ್ದು ಅಂಗಳಕ್ಕಿಳಿದು ಹೋಗ ತೊಡಗಿದನು. ಅಷ್ಟರಲ್ಲಿ ಕೃಷ್ಣನು ಹೊರಗೆ ಬಂದುದನ್ನು ನೋಡಿ, "ನನಗೊಂದು ಮುಖ್ಯ ಕೆಲಸವಿದೆ, ಅವಸರವಾಗಿ ಹೋಗಬೇಕಾಗಿದೆ" ಎಂದು ದೂರದಿಂದಲೇ ಹೇಳಿ ಹೊರಟು ಹೋಗುವ ರಾಮನನ್ನು ನೋಡಿ ಕೃಷ್ಣನಿಗೆ ಕಸಿವಿಸಿಯಾಯಿತು. ತನ್ನ ಹೆಂಡತಿ ಹೇಳಿದ ಮಾತುಗಳನ್ನು ಕೇಳಿ ರಾಮನು ಎಷ್ಟು ನೊಂದುಕೊಂಡನೋ ಅನಿಸಿತು ಕೃಷ್ಣನಿಗೂ. ಆದರೆ ಪಾರ್ವತಿ ರಾಮನ ಮನಸ್ಸಿಗೆ ಎಷ್ಟು ಒಳ್ಳೆಯ ಬುದ್ಧಿಯನ್ನು ಕಲಿಸಿದಳೆಂದು ಕೃಷ್ಣನಿಗೆ ಗೊತ್ತಾಗಲಿಲ್ಲ.

ಮನೆಗೆ ಹೋಗುವಾಗ ರಾಮನು "ಸೌಂದರ್ಯವೆಂದರೆ ಏನದು?" ಎಂದು ತನಗೆ ತಾನೇ ಪ್ರಶ್ನಿಸಿಕೊಂಡನು. ಮನೆಗೆ ಹೋದ ಕೂಡಲೇ ತನ್ನ ಹೆಂಡತಿಯನ್ನು ನೋಡಿ, ಅವನ ಪ್ರಶ್ನೆಗೆ ಉತ್ತರ ಸಿಕ್ಕಿ ಬಿಟ್ಟಿತು. ಅವನ ಹೃದಯದ ಈರ್ಷ್ಯೆ ಹೋಗಿ ಸಮಾಧಾನದಿಂದ ಎಷ್ಟೋ ಹಗುರಾಯಿತು. ರುಕ್ಮಿಣಿಯಷ್ಟು ಸುಂದರಿಯಾದ ಹೆಣ್ಣನ್ನು ತಾನೆಲ್ಲಿಯೂ ನೋಡಿಲ್ಲವೆನಿಸಿ, ಅವಳನ್ನೇ ಮಿಕಿಮಿಕಿ ನೋಡಿದನು. ಗಂಡನ ಎಂದೂ ಇಲ್ಲದ ನೋಟವನ್ನು ನೋಡಿ ರುಕ್ಮಿಣಿಗೆ ಆಶ್ಚರ್ಯವಾಯಿತು, ನಾಚಿಕೆ ಕವಿಯಿತು.





# ದೇವೀಭಾಗವತ

## ೧೧. ನರನಾರಾಯಣರು

ಬ್ರಹ್ಮನ ಮಾನಸಪುತ್ರರಲ್ಲಿ ಧರ್ಮನೆಂಬವನು ಪ್ರಭಾವಶಾಲಿಯಾಗಿದ್ದನು. ಅವನು ದಕ್ಷ ಪ್ರಜಾಪತಿಯ ಅನೇಕ ಕುಮಾರಿಯರಲ್ಲಿ ಹತ್ತುಮಂದಿಯನ್ನು ಮದುವೆಯಾಗಿದ್ದನು. ಅವನಿಗೆ ನಾಲ್ಕು ಮಂದಿ ಗಂಡು ಮಕ್ಕಳಾಗಿದ್ದರು. ಅವರಿಗೆ ಹರಿ, ಕೃಷ್ಣ, ನರ ಮತ್ತು ನಾರಾಯಣ ಎಂದು ಹೆಸರು. ಅವರೊಳಗೆ ದೊಡ್ಡವರಾದ ಹರಿಯೂ ಕೃಷ್ಣನೂ ಯೋಗಾಭ್ಯಾಸಗಳಲ್ಲಿ ಉತ್ತೀರ್ಣರಾಗಿ ದೊಡ್ಡ ಯೋಗಿಗಳಾದರು.

ನರ ಮತ್ತು ನಾರಾಯಣರು ಹಿಮಾಲಯ ಪರ್ವತದ ಮೇಲೆ ಹೋಗಿ, ಮಂದಾಕಿನೀ ನದಿಯ ತೀರದಲ್ಲಿ ಸಾವಿರ ವರ್ಷಗಳ ವರೆಗೆ ತಪಸ್ಸುಮಾಡಿದರು. ಅವರ ತಪಸ್ಸಿನ ಪ್ರಭಾವದಿಂದ ಭೂಮಿ ಕಂಪಿಸಿ ಬೆಟ್ಟಗಳು ನಡುಗುತ್ತಿದ್ದುವು. ಇದನ್ನೆಲ್ಲ ನೋಡಿ ಇಂದ್ರನಿಗೆ ಭಯವಾಯಿತು. ಯಾರು ತೀವ್ರವಾಗಿ ತಪಸ್ಸುಮಾಡುತ್ತಿದ್ದರೂ ಇಂದ್ರನ ಕಾಲುಗಳು ತಣ್ಣಗಾಗುತ್ತಿದ್ದುವು. ಆ ತಪಸ್ವಿಗಳ ಆಸೆ ಇಂದ್ರಪದವಿ ಎಂದೇ ಇಂದ್ರನ ಭ್ರಮೆ. ಅಂತೆಯೇ ಅವನು ನರನಾರಾಯಣರ ತಪಸ್ಸನ್ನು ಹೇಗಾದರೂ ಭಂಗಪಡಿಸಲು ನಿಶ್ಚಯಿಸಿದನು.

ಇಂದ್ರನು ತನ್ನ ಐರಾವತದ ಮೇಲೆ ಕುಳಿತುಕೊಂಡು ನರನಾರಾಯಣರ ಬಳಿಗೆ ಬಂದು, ಆನೆಯಿಂದ ಇಳಿದು ಅವರ ಮುಂದೆ ನಿಂತು ನಮಸ್ಕರಿಸುತ್ತ, "ಮಹಾತ್ಮರೇ! ನೀವು ಯಾವ ಉದ್ದೇಶಕ್ಕಾಗಿ ತಪಸ್ಸು ಮಾಡುವಿರೋ? ನಾನು ಇಂದ್ರನು. ನಿಮ್ಮ ತಪಸ್ಸನ್ನು ನೋಡಿ ಅತ್ಯಾನಂದಪಟ್ಟು ನಿಮಗೆ ಬೇಕಾದ ವರವನ್ನು ಕೊಡಬೇಕೆಂದು ಬಂದಿರುವೆನು. ನಿಮ್ಮ ಅಭೀಷ್ಟವು ನೆರವೇರುವ ಕಾಲ ಬಂದಿತು. ಇನ್ನು ನಿಮ್ಮ ತಪಸ್ಸನ್ನು ನಿಲ್ಲಿಸಬಹುದು. ಏನು ಬೇಕು ನಿಮಗೆ?" ಎಂದನು.

ತಪಸ್ಸಮಾಧಿಯಲ್ಲಿ ಮುಳುಗಿದ್ದ ನರ ನಾರಾಯಣರು ಇಂದ್ರನ ಮಾತಿಗೆ ಕಣ್ಣು ಕೂಡಾ ತೆರೆಯಲಿಲ್ಲ. ಅವನ ಮಾತುಗಳು ಅವರಿಗೆ ಕೇಳಿಸಲೂ ಇಲ್ಲ. ಅವರು ಸುಮ್ಮನಿರುವುದನ್ನು ನೋಡಿ ಇಂದ್ರನಿಗೆ



ಕೋಪ ಬಂದಿತು. ಆದರಿಂದ ಅವನ ಬುದ್ಧಿ ವಿಕಾರವಾಗಲು, ಒಂದು ಮಾಯೆಯನ್ನು ಸೃಷ್ಟಿಸಿದನು. ಅದರ ಫಲಿತವಾಗಿ ಸಿಂಹಗಳೂ, ಹುಲಿಗಳೂ, ಚಿರತೆಗಳೂ, ತೋಳಗಳೂ, ಹಾವುಗಳೂ ಸಹಸ್ರಗಣನೆಯಲ್ಲಿ ಅಲ್ಲೆಲ್ಲಾ ತಿರುಗ ತೊಡಗಿದುವು. ಎಲ್ಲಿ ನೋಡಿದರೂ ನೆರೆಗಳೆದ್ದುವು. ಕಾಡು ಕಿಚ್ಚು ಸುತ್ತಲೂ ಉರಿಯ ತೊಡಗಿತು. ಅದರ ಮೇಲೆ ಗಾಢಾಂಧಕಾರವೂ ಕವಿಯಿತು. ಕತ್ತಲೆಯಲ್ಲಿ ಭಯಂಕರ ಶಬ್ದ ಮಾಡುತ್ತ ಕಲ್ಲಿನ ಮಳೆ ಸುರಿಯಿತು. ಈ ಬಗೆಯ ಇಂದ್ರಜಾಲಗಳಿಗೂ ನರನಾರಾಯಣರು ಚಲಿಸದೆ ತಮ್ಮ ತಪಸ್ಸಿನಲ್ಲಿ ಮುಳುಗಿ ಹೋಗಿದ್ದರು.

ವರ ಕೊಡುವೆನೆಂದರೆ ಕಿವುಡರಾಗಿದ್ದಾರೆ. ಕ್ರೂರ ಮೃಗಗಳನ್ನೂ, ಪ್ರಕೃತಿ ವಿಕೋಪವನ್ನೂ ಲಕ್ಷ್ಯ ಮಾಡಲಿಲ್ಲ. ಈ ನರ ನಾರಾಯಣರ ತಪಸ್ಸನ್ನು ಹೇಗೆ ಹಾಳುಮಾಡಬೇಕೋ ಇಂದ್ರನಿಗೆ ತಿಳಿಯಲಿಲ್ಲ. ಮಹಾದೇವಿಗೆ ಸಂಬಂಧಿಸಿದ ಬೀಜತ್ರಯವೆಂಬ ಮಂತ್ರವನ್ನು ಪುರಶ್ಚರಣೆಮಾಡುತ್ತ ದೇವಿಯ ದಿವ್ಯ ರೂಪದಲ್ಲಿ ಲಯವಾಗಿ ಹೋದವರನ್ನು ಕದಲಿಸಲು ಯಾರಿಂದಲೂ ಸಾಧ್ಯವಿಲ್ಲವೆಂಬುದನ್ನು ಮನಗಂಡು ಇಂದ್ರನು ಸ್ವರ್ಗಕ್ಕೆ ಹಿಂದಿರುಗಿ, ವಸಂತನನ್ನೂ, ಮನ್ಮಥನನ್ನೂ ಕರೆದು ಈ ರೀತಿಯಾಗಿ ಹೇಳಿದನು:

"ನರನಾರಾಯಣರೆಂಬ ಸೋದರರು ಬದರಿಕಾಶ್ರಮದಲ್ಲಿ ಏಕಾಗ್ರತೆಯಿಂದ ತಪಸ್ಸುಮಾಡಿಕೊಂಡಿದ್ದಾರೆ. ಅವರನ್ನು ತಪಸ್ಸಿನಿಂದ ಹೊರಡಿಸಬೇಕೆಂದು ನಾನು ಹೋಗಿ, ಬೇಕಾದ ವರಗಳನ್ನು ಕೊಡುವೆನೆಂದು ಹೇಳಿದೆ; ಅವರು ನನ್ನ ಮಾತನ್ನು ಕೇಳಿಸಿಕೊಳ್ಳಲೂ ಇಲ್ಲ. ಈ ಕೆಲಸ ನಿಮ್ಮ ಹೊರತು ಬೇರೆ ಯಾರಿಂದಲೂ ಆಗದೆಂದು ನಿಮ್ಮನ್ನು ಕರೆಯಿಸಿದ್ದೇನೆ. ಮನ್ಮಥಾ, ನೀನು ವಸಂತನನ್ನೂ ಬೇಕಾದಷ್ಟು ಅಪ್ಸರೆಯರನ್ನೂ ಕರೆದುಕೊಂಡು ಹೋಗಿ ಈ ಕೆಲಸ ಮುಗಿಸಬೇಕು. ಹರಿಹರ ಬ್ರಹ್ಮಾದಿಗಳನ್ನು ಜಯಿಸಿದ ನಿನಗೆ ಈ ನರ ಮುನಿಗಳು ಒಂದು ಲೆಕ್ಕವೇನು? ರಂಭೆ ಮೊದಲಾದ ಅಪ್ಸರೆಯರಲ್ಲಿ ಯಾವಳೋ ಒಬ್ಬಳೇ ಸಾಕು ಅವರ ತಪೋಭಂಗಮಾಡಲು! ನೀನು ಅನೇಕ ಮಂದಿ ಅಪ್ಸರೆಯರನ್ನು ಕರೆದುಕೊಂಡು ಹೋಗು. ಅವರ ಮುಂದೆ ಯಾವ ತಪಸ್ಸೂ ನಿಲ್ಲಲಾರದು. ನಿನಗೆ ಜಯವಾಗಲಿ".

ಇಂದ್ರನ ಮಾತು ಕೇಳಿ ಮನ್ಮಥನು ಸಂದೇಹಿಸುತ್ತ, "ದೇವಾ! ನಾನು ನಿನ್ನ ಕಿಂಕರ. ನಿನ್ನ ಆಜ್ಞೆ ಪಾಲಿಸುವುದು ನನ್ನ ವಿಧಿ. ಆದರೂ ಒಂದು ಭಯ. ನನ್ನ ಮನಸ್ಸಿನಲ್ಲಿರುವುದನ್ನು ಹೇಳಲು ಅಪ್ಪಣೆ ಕೊಡಬೇಕು. ನೀವು ಹೇಳಿದ ಹರಿಹರಬ್ರಹ್ಮರನ್ನು ಕುರಿತು ತಪಸ್ಸುಮಾಡುವವರ ತಪಸ್ಸನ್ನು ಭಂಗಪಡಿಸಬಹುದಾದರೂ ಮಹಾದೇವಿಯನ್ನು ಕುರಿತು ತಪಸ್ಸು ಮಾಡುವವರನ್ನು ಭಗ್ನಪಡಿಸಲು ನನ್ನಿಂದಾಗಲಾರದು. ಬೀಜತ್ರಯಗಳನ್ನು ತಮ್ಮ ಹೃದಯದೊಳಗಿಟ್ಟುಕೊಂಡು ಜಪಿಸುವವರ ತಂಟೆಗೆ ಹೋಗು

ವಂತಹ ಧೈರ್ಯ ನನಗಿಲ್ಲ ಪ್ರಭುವೆ. ಈ ನರ ನಾರಾಯಣರೆಂಬ ಸಹೋದರರು ಆದಿಶಕ್ತಿಯ ಕಟು ಭಕ್ತರು. ಅವರನ್ನು ನನ್ನ ಬಾಣಗಳು ಏನೂ ಮಾಡ ಲಾರವು." ಎಂದನು.

ಆದರೂ ಬಿಡದೆ ಇಂದ್ರನು, "ನಿನ್ನ ಬಾಣಗಳನ್ನು ನೇರಾಗಿ ಪ್ರಯೋಗಿಸಲು ಸಾಧ್ಯವಿಲ್ಲದೆ ಹೋದರೆ ಮಾಯೋಪಾಯವನ್ನು ಮಾಡು. ಇದು ದೇವಕಾರ್ಯ ವಾದುದರಿಂದ ನಿನಗೇನೂ ಆಗದು. ಇಂದ್ರಲೋಕದ ಭಯ ನಿವಾರಣೆಗಾಗಿ ನೀನು ಈ ಕಾರ್ಯ ಮಾಡಿಯೇ ತೀರಬೇಕು." ಎಂದನು.

ಮನ್ಮಥನು ಮತ್ತೇನೂ ಹೇಳದೆ, ಮುಂದಾಗಿ ವಸಂತನನ್ನು ಬದರಿಕಾಶ್ರಮಕ್ಕೆ ಕಳುಹಿಸಿದನು. ಅವನ ಹಿಂದೆ ತಾನು ಸ್ವಲ್ಪತಡವಾಗಿ ರಂಭೆ ಮೊದ ಲಾದ ಅಪ್ಸರಸಿಯರನ್ನು ಕರೆದುಕೊಂಡು ಅಲ್ಲಿಗೆ ಹೋದನು.

ವಸಂತನ ಪ್ರಭಾವದಿಂದ ನರನಾರಾಯಣರು ತಪಸ್ಸುಮಾಡುವ ಸುತ್ತಮುತ್ತಲ ವನಪ್ರದೇಶವು ವಸಂತ ಶೋಭೆಯಿಂದ ಕಂಗೊಳಿಸ ತೊಡಗಿತು. ಹಿತಕರವಾಗಿ ಬೀಸುವ ಗಾಳಿಯಲ್ಲಿ ಮೋಹಕವಾದ ಸುವಾಸನೆಗಳು ತುಂಬಿಕೊಂಡವು. ಗಿಳಿಗಳು ಗುಂಪು ಗುಂಪಾಗಿ ಮರಗಳ ಮೇಲೆ ಸೇರಿ ಕೀಚು ಕೀಚೆಂದು ಕೂಗುತ್ತಿದ್ದುವು. ಆಗಾಗ ಕೋಗಿಲೆಗಳ ಇಂಪಾದ ಕುಹೂರವ; ತುಂಬಿಗಳ ಝೇಂಕಾರ ಧ್ವನಿ. ಆನಂದ ದಾಯಕವಾದ ವಾತಾವರಣ.

ನರನಾರಾಯಣರು ತಮ್ಮ ಸುತ್ತಲೂ ಒಂದು ಸಾರಿ ನೋಡಿ ಈ ಶಿಶಿರ ಋತುವಿನಲ್ಲಿ ಇಂತಹ ವಸಂತ ಲಕ್ಷಣಗಳು ಹೇಗೆ ಬಂದುವೆಂದು ಆಶ್ಚರ್ಯ ಪಟ್ಟು, ಕೂಡಲೇ ತಲೆ ದೂಗಿ ಸುಮ್ಮನಾಗಿಬಿಟ್ಟರು. ತಮ್ಮ ತಪಸ್ಸನ್ನು ಹಾಳುಮಾಡಲಿಕ್ಕಾಗಿ ಇಂದ್ರನು ಮಾಡಿಸಿದ ಆಟವೇ ಇದೆಂದು ಅವರಿಗೆ ಗೊತ್ತಾಯಿತು. ಅದಾವುದನ್ನೂ ಲಕ್ಷ್ಯಮಾಡದೆ ಅವರು ತಪಸ್ಸಿ



ನಲ್ಲಿರುವಾಗ ರಂಭೆ ತನ್ನೊಂದಿಗೆ, ಮೇನಕೆ ಮೊದ ಲಾದ ಹದಿನಾರು ಸಾವಿರದ ಐವತ್ತುಮಂದಿ ಅಪ್ಸರೆಯರನ್ನು ಕರೆದುಕೊಂಡು ಮುಂದೆ ಬರು ತ್ತಿರಲು, ಜತೆಗೆ ಕೋಗಿಲೆಗಳೂ, ಗಿಳಿಗಳೂ ಅವರ ಮೇಲೆ ಸುಳಿಸುಳಿಯಾಗಿ ಲಂಘಿಸಿಕೊಂಡು ಬರು ತ್ತಿರಲು, ಕಬ್ಬಿನಬಿಲ್ಲು, ಹೂಬಾಣಗಳೊಂದಿಗೆ ಸುಸಜ್ಜಿತನಾದ ಮನ್ಮಥನು ಬಂದು ನರನಾರಾಯಣರ ಇದಿರಿನಲ್ಲಿ ನಿಂತನು. ಅದನ್ನು ತಿಳಿದು ನರನಾರಾ ಯಣರು ತಪಸ್ಸನ್ನು ನಿಲ್ಲಿಸಿ ಕಣ್ಣು ತೆರೆದು ಮನ್ಮಥ ನನ್ನು ಒಂದೇ ಸಮನೆ ನೋಡಿದರು.

ಮನ್ಮಥನು ಹೆದರಿ ಕೈ ಮುಗಿದು ಒದಿಗೆ ಸರಿದನು. ಕೂಡಲೇ ಅಪ್ಸರಸಿಯರು ನರನಾರಾಯಣರಿಗೆ ನಮಸ್ಕಾರಗಳ ಲಾಸ್ಯವನ್ನು ಮಾಡುತ್ತ, ಮೋಹ ಪರವಶಗೊಳಿಸುವ ನಾಟ್ಯಗಳಿಂದ ಮಧುರ ಕಂಠ ದಿಂದ ಹಾಡಲು ತೊಡಗಿದರು. ನರನಾರಾ ಯಣರು ಅವರ ವಿಲಾಸಗಳನ್ನು ತಡೆಯು



ವಂತೆ ಕೈಯಾಡಿಸಿದರು. ಆಗ ನಾರಾಯಣನು ಹೀಗೆಂದನು: "ನಮಗೆಲ್ಲಾ ಗೊತ್ತಾಯಿತು. ನಮ್ಮ ತಪಸ್ಸನ್ನು ಭಗ್ನಗೊಳಿಸಲು ನಿಮ್ಮ ಯಜಮಾನನಾದ ಇಂದ್ರನು ನಿಮ್ಮನ್ನೂ ಮನ್ಮಥನನ್ನೂ ವಸಂತನನ್ನೂ ಕಳುಹಿಸಿದ್ದಾನೆ. ಅವನಿಗೆ ನಮ್ಮ ಮೇಲಿರುವ ಈರ್ಷ್ಯೆ ಇದರಿಂದ ಸ್ಪಷ್ಟವಾಯಿತು. ಆದರೂ ನೀವು ನಮ್ಮ ಮಾತನ್ನು ಸ್ವಲ್ಪ ಕೇಳಿಬಿಡಿರಿ. ಪಾಪದ ಹೆಣ್ಣುಗಳಾದ ನೀವು ಬಹಳ ದೂರದಿಂದ ಬಂದು ತುಂಬಾ ಬಳಲಿಹೋದಿರಿ. ಈ ಆಶ್ರಮದಲ್ಲಿ ನೀವು ನಮ್ಮ ಆತಿಥ್ಯವನ್ನು ಸ್ವೀಕರಿಸಿ ದಣಿವಾರಿಸಿಕೊಳ್ಳಿರಿ. ನೀವು ಆ ಇಂದ್ರನ ಅಪ್ಪಣೆಯಂತೆ ಬಂದಿರೇ ಹೊರತು ಇಲ್ಲದಿದ್ದರೆ ಏಕೆ ಬರುವಿರಿ? ಇಂದ್ರನಿಗೊಂದು ಭ್ರಮೆಯೇ ಹೊರತು, ನಮ್ಮ ತಪಸ್ಸನ್ನು ಹಾಳು ಮಾಡಲು ನಿಮ್ಮಿಂದಾದೀತೇ? ಈಗ ನೀವೇ ನೋಡುವಿರಂತೆ, ನೋಡಿದ ಮೇಲೆ ಇಂದ್ರನಿಗೆ ಹೇಳಿಬಿಡಿರಿ. ಈಗ ನನ್ನ ತಪಃಶಕ್ತಿಯಿಂದ ನಿಮ್ಮೆಲ್ಲರ ಸೌಂದರ್ಯವನ್ನೂ ಮೀರಿಸುವ ಸ್ತ್ರೀಯನ್ನು ನಾನೇ ಸೃಷ್ಟಿಸಿ ತೋರಿಸುತ್ತೇನೆ!"

ನಾರಾಯಣನು ತನ್ನ ಬಲದ ತೊಡೆಯ ಮೇಲೆ ಕೈಯಿಂದ ತಟ್ಟಿದನು. ಕೂಡಲೇ ಸುಂದರಾತಿ ಸುಂದರವಾದ ಸ್ತ್ರೀಮೂರ್ತಿಯೊಂದು ಹುಟ್ಟಿ ಬಂದಿತು. ಅವಳೇ ಊರ್ವಶಿ! ಅವಳ ಹಿಂದೆ ಅವಳ ಅನೇಕ ಗೆಳತಿಯರೂ ಹುಟ್ಟಿಬಂದರು. ಊರ್ವಶಿಯ ಸೌಂದರ್ಯವನ್ನು ನೋಡಿ ಅಪ್ಸರೆಯರು ಆಶ್ಚರ್ಯಪಟ್ಟು, ನಾಚಿ ನಾರಾಯಣನೊಂದಿಗೆ ಹೀಗೆಂದರು: "ಮಹಾತ್ಮರೇ! ನಮ್ಮನ್ನು ಕ್ಷಮಿಸಬೇಕು. ನಿಮ್ಮ ತಪಸ್ಸಿನ ಪ್ರಭಾವವನ್ನು ತಿಳಿಯದೆ ತಪೋಭಂಗ ಮಾಡಬೇಕೆಂಬ ದುರುದ್ದೇಶದಿಂದ ನಾವೆಲ್ಲಾ ಬಂದೆವು. ನಾವು ಈ ಮೊದಲು ಎಂತೆಂತಹ ಮುನೀಂದ್ರರ ವ್ರತಗಳನ್ನೂ ಹಾಳುಮಾಡಿದವರೆಂದು ಗರ್ವಗೊಂಡಿದ್ದೆವು. ನಮ್ಮ ಆ ಶಕ್ತಿ ನಿಮ್ಮ ಮುಂದೆ ಕಸಕ್ಕಿಂತ ಕಡೆಯಾಯಿತು. ಆದರೂ ಒಂದು ವಿಧವಾಗಿ ನೋಡುವಾಗ, ನಮ್ಮ ಒಡೆಯನು ನಿಮ್ಮ ತಪಸ್ಸನ್ನು ಹಾಳುಮಾಡಲು ನಮ್ಮನ್ನು ಕಳುಹಿಸಿದ್ದು ನಮ್ಮ ಭಾಗ್ಯವೆಂದೇ ಹೇಳಬೇಕು! ಇಲ್ಲದಿದ್ದರೆ ನಮ್ಮಂಥವರಿಗೆ ನಿಮ್ಮ ದರ್ಶನ ಭಾಗ್ಯ ಲಭಿಸುತ್ತಿತ್ತೇ?"

ಅವಳ ಮಾತು ಕೇಳಿ ನಾರಾಯಣನು ಕಿರುನಗುವನ್ನು ತೋರಿ, "ನೀವು ಈ ಊರ್ವಶಿಯನ್ನು ಕರೆದುಕೊಂಡು ಹೋಗಿ ದೇವೇಂದ್ರನಿಗೆ ಕಾಣಿಕೆಯಾಗಿ ಕೊಡಿರಿ. ನಿಮಗೂ, ದೇವತೆಗಳಿಗೂ, ಇಂದ್ರನಿಗೂ ಶುಭವಾಗಲಿ! ನೀವಿನ್ನು ಹೋಗಿರಿ! ನಮ್ಮ ಗೊಡವೆಗೆ ಬರಬೇಡಿ" ಎಂದನು.

ಅಪ್ಸರೆಯರು ನರನಾರಾಯಣರಿಗೆ ಬಾಗಿ ಕೈ ಮುಗಿಯುತ್ತ – "ಮಹಾತ್ಮರೇ! ನಮ್ಮನ್ನು ಹೋಗುವಂತೆ ಹೇಳಬಾರದು, ನೀವು ನಿಮ್ಮ ತೊಡೆಯಿಂದ ಹುಟ್ಟಿಸಿದ ಊರ್ವಶಿಯೂ, ಇತರ ಸ್ತ್ರೀಯರೂ ಇಂದ್ರನಬಳಿಗೆ ಹೋಗುತ್ತಾರೆ. ನಾವು

ನಿಮ್ಮ ಸೇವೆಮಾಡುತ್ತ ಇಲ್ಲಿಯೇ ಇರಬೇಕೆಂದಿದ್ದೇವೆ. ಇದಕ್ಕೆ ದಯವಿಟ್ಟು ಅನುಮತಿ ಕೊಡಬೇಕು " ಎಂದು ಪ್ರಾರ್ಥಿಸಿಕೊಂಡರು.

ತೊಡೆಯನ್ನು ತಟ್ಟಿ ಅದ್ಭುತ ತೋರಿಸಿದ ನಾರಾಯಣನು ಅಪ್ಸರೆಯರನ್ನು ನೋಡಿ. "ನೀವು ನಮ್ಮಿಂದ ಏನನ್ನು ಅಪೇಕ್ಷಿಸುವಿರಿ? " ಎಂದು ಕೇಳಿದನು.

"ನಿಮ್ಮಂಥವರು ಮಾತು ತಪ್ಪುವವರಲ್ಲ. ನಮ್ಮ ಕೋರಿಕೆಯನ್ನು ನೆರವೇರಿಸುವ ಇಚ್ಛೆ ನಿಮಗಿದ್ದರೆ, ನಮಗೆಲ್ಲರಿಗೂ ನೀವು ಗಂಡನಾಗಬೇಕು. ಇಲ್ಲದೆ ಹೋದರೆ ನಾವು ಕೇವಲ ಅನಾಥರು. ನಮಗೆಲ್ಲಾ ನೀವೇ ಪತಿಯಾಗಿದ್ದರೆ ನಮಗೆ ಸ್ವರ್ಗದ ಅಗತ್ಯವೇ ಇಲ್ಲ." ಎಂದರು ಆ ದೇವಕಾಂತೆಯರು.

"ಚಳಿಗಾಳಿ ಮಳೆ ಬಿಸಿಲುಗಳಿಗೆ ತಡೆದುಕೊಂಡು ಮಾಡಿದ ನನ್ನ ತಪಸ್ಸನ್ನು ನಿಮ್ಮ ಯೌವನಕ್ಕೆ ಸಮರ್ಪಿಸಬೇಕೆಂದು ಕೇಳುವಿರಾ? ಇದು ಸರಿಯೇ? ತಪಸ್ವಿಗಳ ಮುಂದೆ ಇಂಥ ಕೋರಿಕೆ ಕೇಳುವುದು ನ್ಯಾಯವೆ? " ಎಂದು ನಾರಾಯಣನು ಕೇಳಿದನು.

"ಮುನೀಶ್ವರಾ! ದೇವದಾಸಿಯರಾದ ನಮ್ಮ ಸೇವೆಗಳಿಂದ ಅಪಾರವಾದ ಸುಖಗಳನ್ನು ಅನುಭವಿಸುತ್ತ, ಸುಗಂಧಮಯವಾದ ಗಂಧಮಾದನ ಪರ್ವತದ ಮೇಲೆ ವಿಹರಿಸುವ ಸುಖಕ್ಕಿಂತ ಹೆಚ್ಚಿನದು ಸ್ವರ್ಗದಲ್ಲಾದರೂ ಏನಿದೆ? ನೀವು ಮಾಡುವ ತಪಸ್ಸು ಬೇರೆ ಯಾವ ಸುಖಕ್ಕಾಗಿ? ಅದನ್ನಿಷ್ಟು ಹೇಳುವಿರಾ? " ಎಂದರು ಅಪ್ಸರೆಯರು.

ನಾರಾಯಣನಿಗೆ ಚಿವುಕ್ಕೆಂದಿತು, ತಾನು ಅವರನ್ನು ನೋಡಿ ಜಂಬಕ್ಕೆ ಬಿದ್ದು ತಪಃಶಕ್ತಿಯನ್ನು ತೋರಿಸಿ ತಪ್ಪುಮಾಡಿದೆನೆಂದು ತಿಳಿದುಕೊಂಡನು. ಅಪ್ಸರೆಯರು ತಮ್ಮ ತಪಸ್ಸನ್ನು ಕೆಡಿಸಲು ಬಂದವರೆಂದು ತಿಳಿದಾಗ, ಮೌನವಾಗಿದ್ದುಬಿಡಬೇಕಿತ್ತು. ಹಾಗೆ ಮಾಡದೆ ತನ್ನ ತಪೋಧರ್ಮಕ್ಕೆ ವಿರುದ್ಧವಾಗಿ ಅವರಿಗಿಂತ ಸುಂದರಿಯರನ್ನು ಸೃಷ್ಟಿಸಿದುದು ದೊಡ್ಡ



ತಪ್ಪಾಯಿತು. ಅವರನ್ನು ಶೃಂಗಾರಿಕ ಸಂಭಾಷಣೆಗಳಿಗೆ ಆಸ್ಪದ ಗೊಳಿಸಿದ್ದು ಇನ್ನಿಷ್ಟು ತಪ್ಪಾಯಿತು. ತನಗೆ ತಿಳಿಯದಂತೆಯೇ ಪ್ರಪಂಚದ ಮಹಾಮೋಹಪಾಶವು ತನ್ನನ್ನು ಸುತ್ತಿಯೇ ಬಿಟ್ಟಿತು.

ಈಗ ಅವರ ಮೇಲೆ ಸಿಟ್ಟನ್ನು ತೋರಿಸಿ ಓಡಿಸಿಬಿಡಬೇಕೆಂದು ನಾರಾಯಣನಿಗೆ ಆಲೋಚನೆ ಬಂದಿತು. ಆದರ ಬೆನ್ನಿಗೇ ಕೋಪವು ಹಿಂಸೆಗೆ ದಾರಿ ತೆಗೆಯುವುದೆಂದು ಹೆದರಿ, ಏನು ಮಾಡಲೂ ತೋರದಂತಹ ಸ್ಥಿತಿಗೆ ಬಿದ್ದನು.

ನಾರಾಯಣನ ಪರಿಸ್ಥಿತಿಯನ್ನು ನೋಡಿ ನರನು, "ತಮ್ಮಾ, ಕೋಪವು ಯಾರಿಗೂ ಒಳ್ಳೆಯದಲ್ಲ. ಅಹಂಕಾರದ ಕಾರಣದಿಂದಲೇ ಅಲ್ಲವೇ ಪೂರ್ವದಲ್ಲಿ ನಮಗೂ ಪ್ರಹ್ಲಾದನಿಗೂ ಘೋರವಾದ ಯುದ್ಧ ಉಂಟಾಯಿತು? ಈ ಅಪ್ಸರೆಯರನ್ನು ಶಾಂತ ರೀತಿಯಿಂದಲೇ ಏನಾದರೂ ಭರವಸೆ ಹೇಳಿ ಕಳುಹಿಸಿಬಿಡು " ಎಂದನು.



ನಡೆದ ಸಂಗತಿಯನ್ನು ಇಂದ್ರನೊಂದಿಗೆ ಹೇಳಿದರು. ಊರ್ವಶಿಯ ಸೌಂದರ್ಯವನ್ನು ನೋಡಿ ಇಂದ್ರನು ದಿಗ್ಭ್ರಮೆಗೊಂಡು, ನರನಾರಾಯಣರ ತಪಸ್ಸನ್ನು ನೋಡಿ ಹೆದರುವುದನ್ನು ಬಿಟ್ಟು ನೆಮ್ಮದಿ ಗೊಂಡು ಸುಮ್ಮನಾದನು. ಅವರ ತಪಸ್ಸು ನಿರ್ವಿಘ್ನ ವಾಗಿ ಕೊನೆ ಸಾಗಿತು.

ಹೀಗಿರುವಾಗ ಭೃಗುವಿನ ಶಾಪದಿಂದಾಗಿ ನರ ನಾರಾಯಣರು ಅರ್ಜುನ ಕೃಷ್ಣರಾಗಿ ಹುಟ್ಟಬೇಕಾ ಯಿತು. ಕೃಷ್ಣಾವತಾರಕ್ಕೆ ಕಾರಣವಾಗಿ ನಡೆದ ಆ ಪೂರ್ವ ಕಥೆ ಏನೆಂದರೆ :

ಒಂದು ಸಾರಿ ಭೂದೇವಿ ಭೂಭಾರದ ಕಷ್ಟ ವನ್ನು ತಾಳಲಾರದೆ ಇಂದ್ರನ ಬಳಿಗೆ ಹೋಗಿ. ಮೊರೆ ಯಿಟ್ಟುಕೊಂಡಳು. ಇಂದ್ರನು ಅವಳನ್ನು ನೋಡಿ ಕನಿಕರಗೊಂಡು "ನಿನಗಿಷ್ಟು ದುಃಖ ಉಂಟಾಗಲು ಕಾರಣವೇನು?" ಎಂದು ಕೇಳಿದನು. ಆಗ ಭೂದೇವಿ ಹೀಗೆಂದಳು :

"ಭೂಮಿಯಲ್ಲಿ ಅಧಿಕಾರ ಮದಗಳಿಂದ ಅಂಧ ರಾಗಿ ನಡೆಯುವ ಗರ್ವಿಷ್ಟ ದುಷ್ಟರು ತುಂಬಿ ಹೋಗಿರುವರು. ಜರಾಸಂಧ, ಶಿಶುಪಾಲ, ಕಂಸ, ರುಕ್ಮಿ, ನರಕ, ಸಾಲ್ವ, ಕೇಶಿ, ಧೇನುಕ, ವತ್ಸಕ ಇವರಿಷ್ಟು ಮಂದಿ ಒಬ್ಬರನ್ನೊಬ್ಬರು ದ್ವೇಷಿಸುತ್ತ ಅಧರ್ಮ ಮಾರ್ಗದಲ್ಲಿ ನಡೆಯುತ್ತಾರೆ. ಇವರ ಭಾರವು ತಾಳಲಸಾಧ್ಯವಾಗಿದೆ. ಹಿಂದೆ ಹಿರಣ್ಯಾಕ್ಷನ ಭಾರದಿಂದ ನನ್ನನ್ನು ಕಾಪಾಡಲು ಮಹಾವಿಷ್ಣು ವರಾಹಾವತಾರವನ್ನೆತ್ತಿದ ಹಾಗೆ, ಈಗಲೂ ಈ ನನ್ನ ಭಾರವನ್ನು ಕಡಿಮೆ ಮಾಡುವ ಹಾಗೆ ಏನಾದ ರೊಂದು ಆಗಲೇಬೇಕಾಗಿದೆ. ನೀನೇ ಏನಾದರೂ ಮಾಡಬೇಕು."

ಭೂದೇವಿಯ ಪ್ರಾರ್ಥನೆ ಕೇಳಿ ಇಂದ್ರನು, "ನಿನ್ನ ಭಾರವನ್ನು ತೀರಿಸಲು ನಾನೆಷ್ಟರವನು? ನಡೆ, ಬ್ರಹ್ಮನ ಬಳಿಗೆ ಹೋಗಿ ಆಲೋಚನೆ ಕೇಳೋಣ.

ನರನ ಮಾತಿನಿಂದ ನಾರಾಯಣನು ಮನಃಶಾಂತಿ ಗೊಂಡು ಸ್ತಿಮಿತಕ್ಕೆ ಬಂದು, ಅಪ್ಸರೆಯರನ್ನು ನೋಡಿ, "ನಾನು ಈ ಸ್ಥಿತಿಯಲ್ಲಿ ಸ್ತ್ರೀಯ ರನ್ನು ವಿವಾಹ ಮಾಡಿಕೊಳ್ಳುವುದೆಂದರೆ ಊಹಿಸ ಲಾಗದ ಸಂಗತಿ. ಆದುದರಿಂದ ಪ್ರಸ್ತುತ ನೀವೆಲ್ಲರೂ ಸ್ವರ್ಗಕ್ಕೇ ಹೊರಟು ಹೋಗಿಬಿಡಿರಿ. ಈಗ ನೀವು ನನ್ನ ವ್ರತಭಂಗವಾಗದಂತೆ ಅನುಗ್ರಹಿಸಬೇಕು. ಮುಂದೆ ದ್ವಾಪರ ಯುಗದಲ್ಲಿ ನಿಮ್ಮೆಲ್ಲರ ಇಷ್ಟ ವನ್ನೂ ನೆರವೇರಿಸುತ್ತೇನೆ. ಆಗ ನಾನು ದೇವತೆಗಳ ಕೋರಿಕೆಯ ಪ್ರಕಾರ ಭೂಮಿಯಲ್ಲಿ ಹುಟ್ಟಬೇಕಾಗಿ ಬರುತ್ತದೆ. ನೀವು ಆಗ ಬೇರೆ ಬೇರೆ ರಾಜ ಕುಮಾರಿಯರಾಗಿ ಹುಟ್ಟಿ, ನನ್ನ ಹೆಂಡತಿಯರಾಗು ವಿರಿ. ಅದುವರೆಗೆ ಕಾಯಿರಿ, ಈಗ ದಯ ಮಾಡಿ ಹೋಗಿರಿ" ಎಂದನು.

ಈ ಮಾತಿನಿಂದ ಸ್ವಂತೃಪ್ತರಾದ ಅಪ್ಸರೆಯರು ಊರ್ವಶಿ ಮೊದಲಾದವರೊಂದಿಗೆ ಸ್ವರ್ಗಕ್ಕೆ ಹೋಗಿ,

ಅವನೇನಾದರೂ ಉಪಾಯ ಹೇಳಬಹುದು. ನಾನೂ ಬರುತ್ತೇನೆ. ಈಗಲೇ ಹೋಗೋಣ" ಎಂದನು.

ಇಬ್ಬರೂ ಕೂಡಿ ಬ್ರಹ್ಮನ ಬಳಿಗೆ ಹೋಗಿ ಹೇಳಿಕೊಂಡರು. ಭೂದೇವಿ ಬ್ರಹ್ಮನೊಂದಿಗೆ, "ಸೃಷ್ಟಿ ಕರ್ತಾ, ಕೃತತ್ರೇತ ಯುಗಗಳು ಹೋಗಿ ದ್ವಾಪರ ಯುಗವು ಪ್ರವೇಶ ಮಾಡಿತು. ಮುಂದಿನ ಕಲಿಯ ಪ್ರಭಾವವು ಈಗಲೇ ಮೂಡಿದೆ. ಅಧರ್ಮವು ಹೆಚ್ಚಾಗಿದೆ. ರಾಜರು ಔದಾರ್ಯ ಬಿಟ್ಟು ಕಳ್ಳರಾಗಿದ್ದಾರೆ. ಇದೆಲ್ಲಾ ಕೆಟ್ಟ ಭಾರವಲ್ಲವೇ? ದುಷ್ಟರನ್ನು ನಿಗ್ರಹಿಸಿ ನನ್ನ ಭಾರ ತಗ್ಗಿಸಲಾರಿರಾ?" ಎಂದು ರೋದಿಸಿದಳು.

"ಅಮ್ಮಾ, ಅಂತಹ ಶಕ್ತಿ ನನಗೆಲ್ಲಿದೆ? ಅದಕ್ಕೆಲ್ಲಾ ವಿಷ್ಣುವೇ ತಕ್ಕವನು. ಅವನ ಬಳಿಗೆ ಹೋಗೋಣ" ಎಂದು ಬ್ರಹ್ಮನು ತನ್ನ ಹಂಸವಾಹನದ ಮೇಲೆ ಕುಳಿತು ಇಂದ್ರಾದಿದೇವತೆಗಳನ್ನೂ, ಭೂದೇವಿಯನ್ನೂ ಕರೆದುಕೊಂಡು ವೈಕುಂಠಕ್ಕೆ ಹೋದನು.

ವಿಷ್ಣು ಅವರನ್ನೆಲ್ಲಾ ಬೇರೆ ಬೇರೆಯಾಗಿ ಕುಶಲ ಪ್ರಶ್ನೆ ಮಾಡಿ, ಅವರು ಬಂದ ಕೆಲಸವೇನೆಂದು ಕೇಳಿದನು.

"ಭೂದೇವಿ ದುಷ್ಟರ ಹೆಚ್ಚಳದ ಭಾರ ಹೊರಲಾರೆನೆಂದು ಮೊರೆಯಿಡುತ್ತಿದ್ದಾಳೆ. ಆದುದರಿಂದ ನೀನು ಈ ದ್ವಾಪರ ಯುಗಾಂತದಲ್ಲಿ ಅವತಾರವೆತ್ತುವುದು ಈ ಯುಗದ ಹಾಗೂ ಮುಂದಿನ ಕಲಿಯುಗದ ದುಷ್ಟನಿಗ್ರಹ ಶಿಷ್ಟ ರಕ್ಷಣೆಗಳಿಗೂ ಒಳ್ಳೆಯದು. ಇದಕ್ಕೆ ನಿನಗಿಂತ ತಕ್ಕವರು ಯಾರೂ ಇಲ್ಲ. ದೇವರ ದೇವನಾದ ನೀನೇ ದಯಮಾಡಿ ಕಾರ್ಯರಂಗಕ್ಕಿಳಿಯಬೇಕು. ಭೂದೇವಿಯನ್ನು ರಕ್ಷಿಸಬೇಕು." ಎಂದು ಬ್ರಹ್ಮನು ಹೇಳಿದನು.

"ಬ್ರಹ್ಮಾ! ಎಲ್ಲಕ್ಕಿಂತ ಮೇಲಾಗಿ ಯೋಗಮಾಯೆ ಇರುವಳು ಗೊತ್ತಾ? ಅವಳ ಮುಂದೆ ನೀನೂ ನಾನೂ ಶಿವನೂ ದೇವತೆಗಳೂ ಸ್ವತಂತ್ರ ಶಕ್ತಿ ಇಲ್ಲದವರೇ. ಆದುದರಿಂದ ಅವಳನ್ನು ಕೇಳಿ ಅವಳು ಹೇಳಿದಂತೆ ನಾವು ಕೇಳೋಣ. ಆಕೆಯ ಪ್ರೇರಣೆಯಿಂದ ತಾನೇ ನಾನು ಮೊದಲು ಕೆಲವು ಅವತಾರಗಳನ್ನೆತ್ತಿದೆ? ಹಾಗಿಲ್ಲದೆ ಮೀನಾಗಿ, ಆಮೆಯಾಗಿ, ಹಂದಿಯಾಗಿ ಇತರ ಕ್ಷುದ್ರ ಜಂತುಗಳಾಗಿ ಅವತರಿಸುವುದರಿಂದ ಸುಖವೋ ಪುಣ್ಯವೋ ಸ್ವಾರಸ್ಯವೋ ಏನಿದೆ? ರಾಮಾವತಾರವನ್ನೆತ್ತಿ ಕಾಡಿನ ಪಾಲಾಗಿ, ಹೆಂಡತಿಯನ್ನು ಕಳೆದುಕೊಂಡು ಎಷ್ಟು ದುರವಸ್ಥೆಗಳಿಗೆ ಗುರಿಯಾಗಿಲ್ಲ? ಎಲ್ಲಾ ಜಗದಂಬೆಯ ಇಚ್ಛೆಯಂತೆಯೇ ಅಲ್ಲವೇ? ಆದುದರಿಂದ ನೀವೆಲ್ಲಾ ಆ ಜಗದಂಬೆಯನ್ನು ಬೇಡಿಕೊಳ್ಳಿ. ನಿಮ್ಮ ಕೆಲಸ ತೀರುತ್ತದೆ. ಆಕೆಯ ಅನುಗ್ರಹವಿದ್ದರೆ ಎಲ್ಲ ಸುಗಮವಾಗುತ್ತದೆ." ಎಂದು ವಿಷ್ಣು ಬ್ರಹ್ಮಾದಿಗಳಿಗೆ ಹೇಳಿದನು.





# ಮಾಯಕ್ಕೆ ಮಾಯ

ಒಂದು ಊರಿನಲ್ಲಿ ಸಾಂಬನೆಂಬ ಒಬ್ಬ ಬಡಗಿ ಇದ್ದನು. ಅವನಿಗೆ ಇಬ್ಬರು ಗಂಡು ಮಕ್ಕಳು. ದೊಡ್ಡವನಾದ ಶಿವರಾಮನು ನಗರದಲ್ಲಿ ವರ್ತಕರ ಕೈ ಕೆಳಗೆ ಕೆಲಸಮಾಡಿಕೊಂಡಿದ್ದನು. ಎರಡನೇ ಮಗ ಗೋವಿಂದನು ತಂದೆಯ ಹಾಗೆ ಬಡಗಿ ಕೆಲಸ ಕಲಿತು ಕೊಂಡು ತಂದೆಗೆ ಸಹಾಯ ಮಾಡಿಕೊಂಡಿದ್ದನು.

ಒಂದುಸಾರಿ ಗೋವಿಂದನು ತನ್ನ ಅಣ್ಣನನ್ನು ನೋಡಲು ನಗರಕ್ಕೆ ಹೋಗಿದ್ದನು. ಆ ಸಮಯದಲ್ಲಿ ಸಾಂಬನಿಗೆ ಎದೆ ನೋವು ಶುರುವಾಯಿತು. ಗೋವಿಂದನು ಹಿಂದಿರುಗಿ ಬರುವವರೆಗೆ ತಾನು ಬದುಕಿರಲಾರೆನೆಂದು ಸಾಂಬನಿಗೆ ತೋರಿತು. ಆದುದರಿಂದ ಅವನು ನೆರೆಮನೆಯಲ್ಲಿದ್ದ ದೊಡ್ಡ ಧನಿಕ ಸಾಹುಕಾರನಾದ ಭೂಷಣಯ್ಯನನ್ನು ಕರೆಯಿಸಿ, ಅವನಕೈಗೆ ಒಂದು ಚೀಲವನ್ನು ಕೊಡುತ್ತ, "ಅಯ್ಯಾ, ಇದರಲ್ಲಿ ಐದು ಸಾವಿರ ರೂಪಾಯಿಗಳಿವೆ. ಇದನ್ನು ನನ್ನ ಮಗಂದಿರಿಗೆ ಕೊಟ್ಟು, ಇದರಿಂದಾಗಿ ಅವರು ಸೋಮಾರಿಗಳಾಗಿ ಹೋಗದಂತೆ, ಸುಖವಾಗಿ ಬದುಕಿರುವಂತೆ ನೀವೇ ನೋಡಿಕೊಳ್ಳಬೇಕು." ಎಂದು ಬೇಡಿಕೊಂಡನು.

ಹಾಗೆಯೇ ಆಗಲೆಂದು ಭೂಷಣಯ್ಯ ಒಪ್ಪಿಕೊಂಡು, ಆ ಹಣದ ಚೀಲವನ್ನು ತೆಗೆದುಕೊಂಡು ಹೋಗಿ ತನ್ನ ಮನೆಯಲ್ಲಿಟ್ಟು "ಒಳ್ಳೇದೇ ಆಯಿತು" ಎಂದುಕೊಳ್ಳುತ್ತ ಮತ್ತೆ ಬಂದನು. ಅಷ್ಟು ಹೊತ್ತಿಗೆ ಸಾಂಬನ ಪ್ರಾಣ ಹೋಗಿಯೇ ಬಿಟ್ಟಿತ್ತು.

ಕೂಡಲೇ ನಗರದಲ್ಲಿರುವ ಸಾಂಬನ ಮಗಂದಿರಿಗೆ ಸಮಾಚಾರಹೋಯಿತು. ಅವರಿಬ್ಬರೂ ಬಂದು ತಂದೆಗೆ ಉತ್ತರ ಕ್ರಿಯೆಗಳನ್ನು ವಿಧಿಪ್ರಕಾರಮಾಡಿ ಮುಗಿಸಿದರು.

ಆ ಮೇಲೆ ಮನೆಯಲ್ಲಿದ್ದ ಒಂದು ಕವಾಟಿನಲ್ಲಿ ತಂದೆ ಬರೆದಿಟ್ಟ ಒಂದು ಚೀಟು ಅವರ ಕಣ್ಣಿಗೆ ಬಿದ್ದಿತು. ಭೂಷಣಯ್ಯನಿಗೆ ಸಮಾಚಾರ ಕಳುಹಿಸುವುದಕ್ಕೆ ಮೊದಲೇ ಸಾಂಬನು ತನ್ನ ಮಗಂದಿರ ಹೆಸರಿನಲ್ಲಿ ಒಂದು ಚೀಟು ಬರೆದಿಟ್ಟು ಆ ಕವಾಟಿನಲ್ಲಿ ಇರಿಸಿದ್ದನು. ಆ ಚೀಟನ್ನು ಬಿಡಿಸಿ ಓದಿದರು :

"ಮಕ್ಕಳೇ, ನಾನು ಬಹಳ ಕಾಲದಿಂದ ಸೇರಿಸಿಟ್ಟ ಹಣ ಐದು ಸಾವಿರವಾಗಿದೆ. ಅದನ್ನು ಸಾಹುಕಾರ ಭೂಷಣಯ್ಯನವರ ಕೈಗೆ ಕೊಡುತ್ತೇನೆ. ನೀವಿಬ್ಬರೂ ಅವರ ಆಲೋಚನೆಯ ಪ್ರಕಾರವಾಗಿ ಅದನ್ನು

ವಿ. ಎಸ್. ನಾರಾಯಣ



ವಿನಿಯೋಗಿಸಿ, ಸೋಮಾರಿಗಳಾಗದೆ ಸುಖವಾಗಿ ಬದುಕಿರ ಬೇಕೆಂಬುದು ನನ್ನ ಬಯಕೆ. ಒಮ್ಮೆಗೇ ನಿಮ್ಮ ಕೈಗೆ ಕೊಡಬಾರದೆಂತಲೇ ಹೀಗೆ ಮಾಡಿದ್ದೇನೆ." ಎಂದು ಆ ಚೀಟಿಯಲ್ಲಿ ಬರೆಯಲಾಗಿತ್ತು.

ಸಾಂಬನ ಮಗಂದಿರು ಆ ಚೀಟಿಯನ್ನು ತೆಗೆದುಕೊಂಡು ಹೋಗಿ ಭೂಷಣಯ್ಯನಿಗೆ ತೋರಿಸಲು, ಭೂಷಣಯ್ಯ ಬಹಳನೊಂದುಕೊಂಡವನಂತೆ ನಟಿಸುತ್ತ, "ಹಾಗೇನು ? ಪಾಪ, ನಿಮ್ಮ ತಂದೆ ನನ್ನ ಹತ್ತಿರ ಆ ಹಣ ಕೊಡೋಣವೆಂದು ಅಂದುಕೊಂಡನೇನೋ ? ಕೊಡುವುದರೊಳಗೇ ಮೃತ್ಯು ಅತನನ್ನೊಯ್ದಿತು. ಮನೆಯೊಳಗೆಲ್ಲಾ ಜಾಗರೂಕತೆಯಿಂದ ಹುಡುಕಿ ನೋಡಿರಿ ! ನಿಮಗೆ ಬೇಕಾದಾಗ ಆಲೋಚನೆ ಹೇಳುತ್ತೇನೆ. ಪಾಪ, ನನ್ನನ್ನು ತುಂಬಾ ನಂಬಿದವನು ನಿಮ್ಮ ತಂದೆ !" ಎಂದನು.

ಭೂಷಣಯ್ಯ ಮೋಸದ ಬುದ್ಧಿಯಿಂದ ಸುಳ್ಳು ಹೇಳುತ್ತಿರುವನೆಂದು ಸಾಂಬನ ಮಗಂದಿರಿಗೆ ಗೊತ್ತಾಯಿತು. ಏಕೆಂದರೆ ಸಾಂಬನು ಸಾಯುವುದಕ್ಕೆ ಮೊದಲೇ ಒಂದು ಸಾರಿ ಭೂಷಣಯ್ಯ ಬಂದು ಸಾಂಬನೊಂದಿಗೆ ಏನೋ ಗುಟ್ಟು ಮಾತಾಡಿ ಹೋಗಿರುವನೆಂದೂ, ಎರಡನೇ ಸಾರಿ ಭೂಷಣಯ್ಯ ಬಂದಾಗ ಮಾತ್ರ ಸಾಂಬನು ಸತ್ತು ಹೋಗಿರುವನೆಂದೂ ಅವರಿಗೆ ಗೊತ್ತಾಗಿತ್ತು. ಸಾಂಬನು ಭೂಷಣಯ್ಯನಿಗೆ ಹಣ ಕೊಡುವುದಕ್ಕೆ ಮೊದಲು ಚೀಟಿ ಬರೆದಿಟ್ಟಿರಬೇಕು. ಸಾಯುವ ಮೊದಲು ಹಣ ಕೊಟ್ಟಿರುವನೆಂಬುದಕ್ಕೆ ಯಾವ ಸಂದೇಹವೂ ಇಲ್ಲ. ಮನೆಯೊಳಗೆ ಎಲ್ಲಿಯೂ ಅಷ್ಟು ದೊಡ್ಡ ಮೊತ್ತವಿರಲಿಲ್ಲ. ತಂದೆ ಸುಳ್ಳು ಸುಳ್ಳೇ ಬರೆದರೆನ್ನಲೂ ಸಾಧ್ಯವಿಲ್ಲ. ಭೂಷಣಯ್ಯನೇ ಮೋಸಗಾರ.

ಸಾಂಬನ ಮಕ್ಕಳು ಭೂಷಣಯ್ಯನಿಗೆ ಬುದ್ಧಿ ಕಲಿಸಲೇ ಬೇಕೆಂದು ನಿಶ್ಚಯಿಸಿಕೊಂಡರು. ಅದಕ್ಕಾಗಿ ಒಂದು ಉಪಾಯವನ್ನು ಆಲೋಚಿಸಿ, ಭೂಷಣಯ್ಯನ ಮಾತನ್ನು ನಂಬಿದಂತೆ ನಟಿಸಿದರು.

ಮರುದಿನ ಶಿವರಾಮನು ಭೂಷಣಯ್ಯನ ಬಳಿಗೆ ಬಂದು, "ನಮ್ಮ ತಂದೆ ಸಾಯುವ ಮೊದಲು ನಿಮ್ಮನ್ನೇ ದಿಕ್ಕಾಗಿ ತೋರಿಸಿದ್ದಾರೆ. ಆದುಧರಿಂದ ಈಗ ನೀವೇ ನಮಗೆ ದಿಕ್ಕೆಂದು ನಂಬಿದ್ದೇವೆ. ನನ್ನ ತಮ್ಮ ಗೋವಿಂದನು ಬಡಗಿ ಕೆಲಸಮಾಡುತ್ತ ಇಲ್ಲಿಯೇ ಇರುವೆನೆಂದು ಹೇಳುತ್ತಾನೆ. ಅವನನ್ನು ಒಂಟಿಯಾಗಿ ಮನೆಯಲ್ಲಿ ಬಿಟ್ಟುಹೋಗಲಾರೆ. ಆದುದರಿಂದ ನಾನೂ ಗ್ರಾಮದಲ್ಲೇ ಇರೋಣವೆಂದಿದ್ದೇನೆ. ನೀವು ನನಗೆ ಕೂಡಾ ಇಲ್ಲಿಯೇ ಹೊಟ್ಟೆ ತುಂಬುವ ಹಾಗೆ ಏನಾದರೂ ಒಂದು ದಾರಿ ತೋರಿಸಬೇಕು." ಎಂದನು.

"ಹಾಗಾದರೆ ಒಂದು ಮಾಡು. ನಮ್ಮ ಮನೆಯ ಜಮಾ ಖರ್ಚುಗಳನ್ನು ನೋಡುತ್ತ ನನ್ನ ಹತ್ತಿರವೇ ಕೆಲಸ ಮಾಡು. ಅಷ್ಟು ಮಾತ್ರ ಸಹಾಯ ಮಾಡದೆ ಹೋಗುವೆನೇ ?" ಎಂದನು ಭೂಷಣಯ್ಯ.

ಅಂತೆಯೇ ಶಿವರಾಮನು ಭೂಷಣಯ್ಯನ ಮನೆಯನ್ನು ಸೇರಿದನು. ನಗರದಲ್ಲಿದ್ದ ಅವನ ವ್ಯಾಪಾರವನ್ನು ಕೆಲವು ದಿನಗಳವರೆಗೆ ಮುಚ್ಚಿ ಬಿಟ್ಟನು. ಭೂಷಣಯ್ಯನ ಮನೆಯಲ್ಲಿರುವವರೆಲ್ಲರ ವಿಶ್ವಾಸಕ್ಕೂ ಪಾತ್ರನಾಗುವಂತೆ, ಅವರ ಕುಟುಂಬ ದೊಳಗಿನ ಒಬ್ಬ ಮನುಷ್ಯನಂತೆ ಆಗಿ ಹೋದನು. ಆದುದರಿಂದ ಆ ಮನೆಯೊಳಗಿನ ಗುಟ್ಟು ಗೂಢಗಳೆಲ್ಲ ಅವನಿಗೆ ತಿಳಿದು ಬಂದುವು.

ಭೂಷಣಯ್ಯ ತನ್ನ ಧನವನ್ನೆಲ್ಲಾ ಒಂದು ಪೆಟಾರಿಯಂಥ ಪೆಟ್ಟಿಗೆಯಲ್ಲಿಟ್ಟು, ಅದನ್ನು ನಾಲ್ಕುಮಂದಿ ತಿರುಗುವ ನಡು ಮನೆಯಲ್ಲೇ ಇಟ್ಟು, ಅದರಲ್ಲಿ ಹಳೆಯ ಬಟ್ಟೆಗಳೂ ಇತರ ಹುರುಮುರುಕು ವಸ್ತುಗಳೂ ಹೊರತು ಬೇರೇನೂ ಬೆಲೆ ಬಾಳುವಂಥಾದ್ದಿಲ್ಲವೆಂಬಂತೆ ಮಾಡಿದ್ದನು. ಯಾವಾಗಲೂ ಅದರ ಮೇಲೆ ಹಳೆಬಟ್ಟೆ ಮುಚ್ಚಿಕೊಂಡಿರುತ್ತಿತ್ತು. ಆದರೆ ಮನೆಯವರು ಯಾರೋ ಒಬ್ಬರು ಯಾವಾಗಲೂ ಅದನ್ನು ಒಂದು ಕಣ್ಣಿನಲ್ಲಿ ನೋಡಿಕೊಂಡೇ ಇದ್ದರು. ಆದುದರಿಂದ ಅದು ಧನದ ಪೆಟ್ಟಿಗೆಯೇ ನಿಜ. ಶಿವರಾಮನು ಸಂಧಿ ದೊರಕಿದಾಗ ಆ ಪೆಟಾರಿಯ ಅಳತೆಗಳನ್ನು ಬರೆದಿಟ್ಟುಕೊಂಡನು.

ಒಂದು ದಿನ ರಾತ್ರಿ ಭೂಷಣಯ್ಯನ ಮನೆಯ ಬಾಗಿಲನ್ನು ಯಾರೋ ತಟ್ಟಿದರು. ಭೂಷಣಯ್ಯ ನಿದ್ದೆಗಣ್ಣಿನಲ್ಲಿ ಎದ್ದು ಬಂದು ಬಾಗಿಲು ತೆರೆದು ಯಾರೆಂದು ನೋಡಿದನು. ಹೊರಗೆ ರಾಜಕುಮಾರನ ಹಾಗೆ ದುಸ್ತು ಹಾಕಿಕೊಂಡಿರುವವನೊಬ್ಬನು ನಿಂತಿದ್ದನು. ಅವನ ಹಿಂದೆ ಮತ್ತೆ ಕೆಲವರು ಕತ್ತಲೆಯಲ್ಲಿದ್ದರು.

ರಾಜಕುಮಾರನು ಭೂಷಣಯ್ಯನಿಗೆ ನಮಸ್ಕಾರ ಮಾಡಿ, "ಈ ಪ್ರಾಂತದಲ್ಲಿ ನಿಮ್ಮನ್ನು ಮೀರಿಸುವ ಧನವಂತರಿಲ್ಲವೆಂದು ಕೇಳಿದೆನು, ನಮ್ಮದು ಬೇರೆ ದೇಶ. ನಮ್ಮ ಮೇಲೆ ಆಕಸ್ಮಾತ್ತಾಗಿ ದೊಡ್ಡ ಆಪತ್ತು ಬಂದುಬಿದ್ದಿದೆ. ನಾನು ಮುಖ್ಯವಾದ ಸ್ವಲ್ಪ ಸೊತ್ತು ದಕ್ಕಿಸಿಕೊಂಡು ತಪ್ಪಿಸಿಕೊಂಡು ಬಂದವನು. ನನ್ನ ಧನವೆಲ್ಲಾ ಈ ಪೆಟ್ಟಿಗೆಯಲ್ಲಿದೆ. ಇದನ್ನು ದಯ





ಮಾಡಿ ನಿಮ್ಮ ಹತ್ತಿರ ಇಟ್ಟುಕೊಂಡರೆ, ಒಳ್ಳೆಯ ದಿನಗಳು ಬಂದಾಗ ನಾನು ಬಂದು ತೆಗೆದುಕೊಂಡು ಹೋಗುತ್ತೇನೆ. ನೀವು ಇದೊಂದು ಸಹಾಯಮಾಡಿದಿರಾದರೆ ನಿಮ್ಮನ್ನೆಂದೂ ಮರೆಯಲಾರೆ" ಎಂದನು.

ಆಗ ತಾನೇ ಭೂಷಣಯ್ಯ ಪೆಟ್ಟಿಗೆಯೊಂದು ಅಲ್ಲಿರುವುದನ್ನು ನೋಡಿದನು. ಪೆಟಾರಿಯಂತಹ ದೊಡ್ಡ ಪೆಟ್ಟಿಗೆಯದು. ಜಗಲಿಯಲ್ಲಿದ್ದ ಆ ಪೆಟ್ಟಿಗೆಯ ಮೇಲೆ ಮಕ್ಮಲ್ ಬಟ್ಟೆ ಮುಚ್ಚಲಾಗಿತ್ತು. ಅಂತಲೇ ಅದು ಕತ್ತಲೆಯೊಂದಿಗೆ ಕೂಡಿಹೋಗಿತ್ತು.

ಭೂಷಣಯ್ಯ ಆ ಪೆಟ್ಟಿಗೆಯನ್ನು ತನ್ನ ಮನೆಯಲ್ಲಿಡಲು ಒಪ್ಪಿದ ಮೇಲೆ, ರಾಜಕುಮಾರನ ಸೇವಕರು ಆ ಪೆಟ್ಟಿಗೆಯನ್ನು ಒಳಗೆ ತಂದರು. ಭೂಷಣಯ್ಯ ನಡು ಮನೆಯಲ್ಲಿದ್ದ ತನ್ನ ಪೆಟ್ಟಿಗೆಯನ್ನು ಬದಿಗೆ ಸರಿಸಿ ಸ್ಥಳಮಾಡಿ ಆ ಪೆಟ್ಟಿಗೆಯನ್ನು ಅದರ ಬದಿಯಲ್ಲೇ ಇರಿಸಿದನು. ಇಷ್ಟಾದ ಮೇಲೆ ರಾಜಕುಮಾರನು ಅಪ್ಪಣೆ ಪಡೆದು ತನ್ನ ಸೇವಕರೊಂದಿಗೆ ಹೊರಟುಹೋದನು. ಭೂಷಣಯ್ಯ ತನ್ನ ಅದೃಷ್ಟವನ್ನು ನೆನೆದು ಸಂತೋಷಿಸುತ್ತ ಮಲಗಿದನು. ಈ ರಾಜಕುಮಾರನಿಗೆ ಒಳ್ಳೆಯ ದಿನಗಳು ಬಾರದಿದ್ದರೆ ಆ ಐಶ್ವರ್ಯದ ಪೆಟ್ಟಿಗೆ ತನ್ನದೇ! ಒಂದುವೇಳೆ ಅವನಿಗೆ ಒಳ್ಳೆಯ ದಿನಗಳು ಬಂದರೆ, ತನಗೆ ಜೀವಿತಾಂತ್ಯದವರೆಗೆ ಆ ರಾಜಕುಮಾರನ ಆಶ್ರಯವಿದ್ದೇ ಇರುತ್ತೆ! ಹೀಗೆ ಏನೇನೋ ಸೊಗಸು ಸ್ವಪ್ನಗಳಿಗೆ ಜಾರುತ್ತ ಗಾಢ ನಿದ್ರೆಗೆ ಬಿದ್ದನು ಭೂಷಣಯ್ಯ.

ಆ ಮೇಲೆ ಸ್ವಲ್ಪ ಹೊತ್ತು ಕಳೆಯುತ್ತಿರಲು, ರಾಜಕುಮಾರನ ಪೆಟ್ಟಿಗೆಯ ಮೇಲಿನ ಮಕ್ಮಲ್ ಬಟ್ಟೆ ಜಾರಿ ಕೆಳಗೆ ಬಿದ್ದಿತು; ಅದರ ಬಾಗಿಲು ಮೇಲಕ್ಕೆದ್ದಿತು. ಅದರೊಳಗಿನಿಂದ ಗೋವಿಂದನು ಎದ್ದು ಬಂದನು. ಅವನು ಮತ್ತೆ ಆ ಪೆಟ್ಟಿಗೆಯನ್ನು ಮುಚ್ಚಿ ಭೂಷಣಯ್ಯನ ಪೆಟ್ಟಿಗೆಯ ಮೇಲಿನ ಹಳೆಯ ಬಟ್ಟೆಯನ್ನು ಅದರ ಮೇಲೆ ಮುಚ್ಚಿದನು. ತನ್ನ ಪೆಟ್ಟಿಗೆಯ ಮೇಲಿನ ಮಕ್ಮಲ್ ಬಟ್ಟೆಯನ್ನು ಭೂಷಣಯ್ಯನ ಪೆಟ್ಟಿಗೆಯ ಮೇಲೆ ಮುಚ್ಚಿ, ನಿಶ್ಶಬ್ದವಾಗಿ ಹಿಂದಿನ ಬಾಗಿಲು ತೆರೆದುಕೊಂಡು ಹೊರಗೆ ಹೋದನು.

ಭೂಷಣಯ್ಯ ಗಟ್ಟಿಯಾದ ಗಾಢ ನಿದ್ರೆಯಲ್ಲಿರುವಾಗ, ಯಾರೋ ಬಡಿದು ಅವನನ್ನು ಎಬ್ಬಿಸಿದರು. ಭೂಷಣಯ್ಯ ಮೆಟ್ಟಿ ಬಿದ್ದು ಎದ್ದು ಕುಳಿತು. ತನ್ನ ಮಂಚದ ಬದಿಯಲ್ಲಿ ಯಾವನೋ ಆಯುಧಪಾಣಿ ಭಟನಂಥವನು ನಿಂತಿರುವುದನ್ನು ನೋಡಿ ಗಾಬರಿಯಾಗಿ, "ಯಾರು ನೀವು? ಹೇಗೆ ಒಳಗೆ ಬಂದಿರಿ?" ಎಂದು ನಡುಗುವ ಸ್ವರದಲ್ಲಿ ಕೇಳಿದನು.

ಭಟನು ದರ್ಪವಾಗಿ "ನಾನು ಪ್ರಶ್ನೆ ಕೇಳುತ್ತೇನೆ. ನೀನು ಉತ್ತರ ಹೇಳಬೇಕು. ಸ್ವಲ್ಪ ಹೊತ್ತಿನ ಮೊದಲು ಈ ಮನೆಗೆ ರಾಜಕುಮಾರನು ಬಂದು ಎರಡು ಪೆಟ್ಟಿಗೆಗಳನ್ನು ಅಡಗಿಸಿಟ್ಟು ಹೋದ ಸಂಗತಿ

ಗೊತ್ತಾಗಿದೆ. ಅವನನ್ನು ಹುಡುಕಿ ಹಿಡಿಯಬೇಕೆಂದು ನಮ್ಮ ಹೊಸ ರಾಜರ ಆಜ್ಞೆ. ಎಲ್ಲಿದ್ದಾನೆ ಅವನು?" ಎಂದು ಕೇಳಿದನು.

ಭೂಷಣಯ್ಯ ನಡುಗುತ್ತ "ನಿಜ, ಆ ರಾಜಕುಮಾರ ಆಗಲೇ ಹೊರಟು ಹೋದ, ನನ್ನ ಮನೆಯಲ್ಲಿ ಯಾವುದೋ ಒಂದು ಪೆಟ್ಟಿಗೆ ಇಟ್ಟಿದ್ದಾನೆ. ಅದರೊಳಗೆ ಏನಿದೆಯೋ ನಾನರಿಯೆ. ಬೇಕಾದರೆ ಆ ಪೆಟ್ಟಿಗೆಯನ್ನು ನೀವು ತೆಗೆದುಕೊಂಡು ಹೋಗಿರಪ್ಪ. ಏನೋ ಉಪಕಾರ ಮಾಡಿದರೆ ಹೀಗಾಗಬೇಕೆ?" ಎಂದು ತನ್ನ ಹಣೆ ಬಡೆದುಕೊಂಡನು.

ಭಟನು ಅಕ್ಕಪಕ್ಕದಲ್ಲಿದ್ದ ಎರಡು ಪೆಟ್ಟಿಗೆಗಳನ್ನು ನೋಡಿ, "ಇವೆರಡೂ ಅವನು ತಂದಿಟ್ಟ ಪೆಟ್ಟಿಗೆಗಳೇ" ಎಂದನು.

ಅವುಗಳಲ್ಲಿ ಹಳೆಯ ಬಟ್ಟೆ ಮುಚ್ಚಿದ ಪೆಟ್ಟಿಗೆ ತನ್ನದೆಂದೂ, ಮಕ್ಮಲ್ ಬಟ್ಟೆ ಮುಚ್ಚಿದ ಪೆಟ್ಟಿಗೆ ಮಾತ್ರ ರಾಜಕುಮಾರನು ತಂದಿಟ್ಟುದೆಂದೂ ಭೂಷಣಯ್ಯ ಪ್ರಮಾಣ ಮಾಡಿದ ಮೇಲೆ ಭಟನು, "ಸರಿ. ದೊಡ್ಡ ಮನುಷ್ಯನಾದ ನಿನ್ನ ಮಾತು ನಂಬುತ್ತೇನೆ. ಇನ್ನೊಂದು ಪೆಟ್ಟಿಗೆ ಬೇರೆಲ್ಲೋ ಇಟ್ಟಿರಬೇಕು" ಎಂದು ಕೈ ತಟ್ಟಿದನು, ಕೂಡಲೇ ನಾಲ್ಕು ಮಂದಿ ಮನುಷ್ಯರು ಒಳಗೆ ಬಂದರು. ಅವರಿಂದ ಮಕ್ಮಲ್ ಬಟ್ಟೆ ಮುಚ್ಚಿದ ಪೆಟಾರಿಯನ್ನು ಹೊರಿಸಿಕೊಂಡು ಭಟನು ಹೊರಟು ಹೋದನು. ಆ ಪೆಟ್ಟಿಗೆಯಲ್ಲಿಯೇ ಭೂಷಣಯ್ಯನ ಧನವೆಲ್ಲಾ ಇದ್ದಿತು.

ಬಹಳ ಹೊತ್ತಿನ ಮೇಲೆ ಭೂಷಣಯ್ಯ ಸಮಾಳಿಸಿಕೊಂಡು, ದೊಡ್ಡ ಆಪತ್ತು ತಪ್ಪಿ ಹೋಯಿತೆಂಬ ಸಮಾಧಾನದಲ್ಲಿ ಇನ್ನೊಂದು ಪೆಟ್ಟಿಗೆಯ ಹಳೆಯ ಬಟ್ಟೆಯ ಮುಸುಕನ್ನು ತೊಲಗಿಸಿ ಅದರ ಮುಚ್ಚಳವನ್ನು ತೆರೆದನು. ಅದರೊಳಗೆ ಏನೂ ಇರಲಿಲ್ಲ.

ತನ್ನ ಎಲ್ಲಾ ಧನವೂ ಹೋಯಿತೆಂದು ಭೂಷಣಯ್ಯನನ್ನು ಅನುಸರಿಸಿ ಮನೆಯವರೆಲ್ಲಾ ಗೋಳಾಡತೊಡಗಿದರು. ಬೆಳಗಾದ ಮೇಲೆ ಶಿವರಾಮನು ಬಂದು, ನಡೆದ ಸಂಗತಿಯನ್ನೆಲ್ಲಾ ಕೇಳಿ, ತಾನುಕೂಡಾ ತುಂಬಾ ಕಣ್ಣೀರಿಳಿಸಿ ಗೋಳಿಟ್ಟು, "ಇನ್ನು ನಾನು ನಿಮ್ಮ ಮನೆಯಲ್ಲಿ ಎಂತಹ ಜಮಾ ಖರ್ಚು ನೋಡಲಿಕ್ಕಿದೆ? ಇದ್ದುದೆಲ್ಲಾ ಖರ್ಚೇ ಆಯಿತಲ್ಲ!" ಎಂದು ಕಣ್ಣೊರಿಸಿಕೊಳ್ಳುತ್ತಾ, ಅಪ್ಪಣೆ ಪಡೆದು ಹೊರಟು ಹೋದನು.

ಇದಾಗಿ ಕೆಲವು ದಿನಗಳ ಮೇಲೆ, ಸಾಂಬನು ರಹಸ್ಯವಾಗಿ ಅಡಗಿಸಿಟ್ಟ ಧನವು ಮಗಂದಿರಿಗೆ ಸಿಕ್ಕಿತೆಂದು ಊರೊಳಗೆ ಸುದ್ದಿ ಹರಡಿತು. ಶಿವರಾಮನು ಆ ಹಣದಿಂದ ತನ್ನ ವ್ಯಾಪಾರವನ್ನು ಅಭಿವೃದ್ಧಿ ಪಡಿಸಿದುದೂ ಗೊತ್ತಾಯಿತು. ಗೋವಿಂದನೂ ಒಳ್ಳೆಯ ಸ್ಥಿತಿಗೇರಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೭೭ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**







A. L. Syed

P. V. Subramaniam

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಸೆಪ್ಟೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ಜುಲೈ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಒಳಗೆ ಯಾರಿದ್ದಾರೋ?**

ಎರಡನೇ ಫೋಟೋ: **ಅವನು ನಿನ್ನ ಪಂಡಿತ ಅಣ್ಣನೇ!**

ಕಳುಹಿಸಿದವರು: ಪಿ. ಎನ್. ವಿ. ರಾಮನ್,

೧೦೭, ಚೌಧ್ರೀ ನಗರ್, ಮದ್ರಾಸು-೮೭

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.**

# ಇವರೇ ರಾಷ್ಟ್ರದ ಸಂಪತ್ತು

## ಇವರ ಜವಾಬ್ದಾರಿ ಅಧಿಕಾಂಶ ಯೂಕೊಬ್ಯಾಂಕ್‌ಗೆ ವಹಿಸಿಕೊಡಲಾಗಿದೆ.

ಮಕ್ಕಳೇ ರಾಷ್ಟ್ರದ ಸಂಪತ್ತು. ರಾಷ್ಟ್ರದ ಅಭ್ಯುದಯ ಮಕ್ಕಳ ಬೆಳವಣಿಗೆ, ಲಾಲನೆ-ಪಾಲನೆ ಮತ್ತು ವಿದ್ಯಾಭ್ಯಾಸದ ಮೇಲೆ ಹೊಂದಿಕೊಂಡಿದೆ. ತಿಳುವಳಿಕೆಯುಳ್ಳ ತಂದೆತಾಯಿಯವರು ನಮ್ಮ ಮೇಲಿಟ್ಟ ದೃಢ ವಿಶ್ವಾಸಕ್ಕೆ ಅಭಿನಂದಿಸುತ್ತೇವೆ.

ಈ ಅಂತರ್ರಾಷ್ಟ್ರೀಯ ಶಿಶುವರ್ಷದಲ್ಲಿ ನಮ್ಮಲ್ಲಿಯ ಮೈನರ್ಸ್ ಸೇವಿಂಗ್ಸ್ ಅಕೌಂಟ್‌ಗಳು ವೃದ್ಧಿಗೊಂಡಿವೆ. ಇದರಿಂದ ತಿಳಿಯುವುದೇನೆಂದರೆ, ಹೆಚ್ಚೆಚ್ಚು ತಂದೆತಾಯಂದಿರು ಅವರ ಸಂಪತ್ತಿನ ಜವಾಬ್ದಾರಿಯನ್ನು ನಮಗೆ ವಹಿಸಿಕೊಡುತ್ತಿದ್ದಾರೆ.



**ಯುನೈಟೆಡ್ ಕಮರ್ಶಿಯಲ್ ಬ್ಯಾಂಕ್**

ಅಕ್ಕಪಕ್ಕದಲ್ಲಿರುವ ಸೌಕರ್ಯ ನೀಡುವ ಬ್ಯಾಂಕ್

UCO/CAS-41/79 KAN

# ಮೀನಾಳಿಗೆ ಜಾಮೆಟ್ರಿ ಎಂದರೆ ಕಡು ವೈರ–ಆದರೆ ಈಗ ಅದು ಅವಳ ಅಚ್ಚುಮೆಚ್ಚು

ಮೀನಾಳಿಗೆ ಜಾಮೆಟ್ರಿಯಷ್ಟು ಬೇಸರಿಕೆಯನ್ನುಂಟುಮಾಡುವ ಪಾಠ ಬೇರೊಂದಿರಲಿಲ್ಲ.

ಅವಳಿಗೆ ಅದರಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಆ 'ಅಕ್ಯೂಟ್' ಮತ್ತು 'ಆಬ್‌ಟ್ಯೂಸ್' ಆ್ಯಂಗಲ್‌ಗಳು, ಆ ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳು ಎಂದರೆ ಬರೇ ತಲೆನೋವು— ಅವಳಿಗೆ ಸಾಕುಸಾಕಾಗುತ್ತಿತ್ತು.

ಒಂದು ದಿನ ಒಂದು ವಿಶೇಷ ಸಂಗತಿ ನಡೆಯಿತು! ಅವಳ ಅಣ್ಣ ರಾಜೂ ಅವಳಿಗೆ ಒಂದು ಅಂದವಾದ ಹಳದಿ ಹಾಗೂ ಕಿತ್ತಳೆ ಬಣ್ಣದ, ಬೆಳ್ಳಿಹೊಳಪಿನ ಆಕರ್ಷಕ ಕಂಪಸ್ ಪೆಟ್ಟಿಗೆ ತಂದು ಕೊಟ್ಟನು.

ಮೀನಾ ಆ ಪೆಟ್ಟಿಗೆ ಮತ್ತು ಉಪಕರಣಗಳಿಗೆ ಮಾರು ಹೋದಳು. ಅದೇ ದಿನ ರಾತ್ರಿ ತಾನು ತ್ರಿಕೋಣದ ಶಿಖರವನ್ನೇರಿದ, ವೃತ್ತದೊಳಗೆ ಉರುಳಿದ ಹಾಗೂ ಸ್ಕೇಲ್‌ನಲ್ಲಿ ತೂಗಾಡಿದ ಕನಸು ಕಂಡಳು. ಏನು ಮಜಾ!

ಈಗಂತೂ ಮೀನಾಳಿಗೆ ಜಾಮೆಟ್ರಿ, ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳೆಂದರೆ ಬಲು ಇಷ್ಟ. ಜಾಮೆಟ್ರಿ ಈಗ ಮೀನಾಳ ಪ್ರೀತಿಪಾತ್ರವಾಗಿದೆ. ಇದು ಆಶ್ಚರ್ಯಕರವಲ್ಲವೆ?





## ಕ್ಯಾಮೆಲ್

ಇನ್‌ಸ್ಟ್ರುಮೆಂಟ್ ಬಾಕ್ಸ್








ಕ್ಯಾಮ್ಲಿನ್ ಪ್ರೈ. ಲಿ.,
ಆರ್ಟ್ ಮಟೀರಿಯಲ್
ಡಿವಿಜನ್,
ಜೆ. ಬಿ. ನಗರ್,
ಬೊಂಬಾಯಿ 400 059.



ಕ್ಯಾಮ್ಲಿನ್‌ನ
ತಯಾರಕರಿಂದ: ತುಂಡಾಗದ ಪೆನ್ಸಿಲುಗಳು

VISION 794 KAN

**Results of Chandamama—Camlin Colouring Contest No. 9 (Kannada)**

*1st Prize*: Mohan L. Kulkarni, Belgaum. *2nd Prize*: Mahabaleshwara, Belur. *3rd Prize*: Sandhya, B., Mangalore - 575 003. *Consolation Prizes*: Jayalakshmi S. Divekar, Tumkur - 572 102; S. N. Simha, Mysore - 4; Chandrasheker Sanga, Ukal; M. K. Dinesh, Mysore; Kumari Seema Pattanshetti, Dharwad.

CHANDAMAMA (Kannada) SEPTEMBER 1979 Regd. No. M. 5210

# ಚಿಕ್ಕ ಮಕ್ಕಳು ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

## ಪಾರ್ಲೆ ಗ್ಲುಕೋ

## ಅಪೂರ್ವವಾದ ರುಚಿ

## ತುಂಬಿ ತುಳುಕುವ ಶಕ್ತಿ

ಹಾಲು, ಗೋದಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.

ಪಾರ್ಲೆ

ಗ್ಲುಕೋ

ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್ –
ವರ್ಲ್ಡ್ ಅವಾರ್ಡ್‌ನ ವಿಜಯಿ

everest/78/PP/131·kn



# ಕರಡಿ ಕೆಂಗಣ್ಣ

## ೧೪

[ಕರಡಿ ಕೆಂಗಣ್ಣನೂ, ಕಾಳೀವರ್ಮನೂ ಮಾಯಾಮರ್ಕಟವನ್ನು ಬೆಂಬತ್ತಿ ಕೋಟೆಯ ಬಳಿಗೆ ಬಂದರು. ಕೋಟೆಯೊಳಗೆ ನಡೆಯುವ ಯುದ್ಧವನ್ನು ಕುರಿತು ಕಟುಕಭಲ್ಲೂಕನು ಅವರಿಗೆ ಹೇಳಿದನು. ಜಿತಕೇತುರಾಜನ ಮಂತ್ರಿ ಜೀವಗುಪ್ತನು ಅಲ್ಲಿಗೆ ಬಂದು ಒಬ್ಬ ಸೈನಿಕನನ್ನು ಕಾಳೀವರ್ಮನ ಬಳಿಗೆ ಸಂಧಾನಕ್ಕೆ ಕಳುಹಿಸಿದನು. ಕಾಳೀವರ್ಮನು ಅವನನ್ನು ಭಂಗಿಸುವಷ್ಟರಲ್ಲಿ, ಕಳ್ಳನಾಗಮಲ್ಲನು ಕೋಟೆಯ ಬಾಗಿಲಿಗೆ ಬೆಂಕಿ ಹಚ್ಚಿದನು.]

ಕೋಟೆಯ ಬಾಗಿಲಿಗೆ ಹಿಡಿದ ಬೆಂಕಿ ಆಕಾಶದೆತ್ತರಕ್ಕೆ ತನ್ನ ಜ್ವಾಲೆಯನ್ನೆಬ್ಬಿಸಿ ಉರಿಯುವುದನ್ನು ನೋಡುತ್ತಲೇ, ಕಟುಕಕರಡಿಯವನು ಅತ್ಯುತ್ಸಾಹದಿಂದ ಓಡಿ ಹೋಗಿ ತನ್ನ ಮೊಂಡುಸೊಂಡಿಲಿನ ಆನೆಯ ಮೇಲೇರಿ, ದೊಡ್ಡ ಕಂಠದಿಂದ, "ಕಾಳೀವರ್ಮ ದೊರೆಗಳೇ! ಇನ್ನೇನು? ಬಾಗಿಲು ಹೋಯಿತಲ್ಲಾ! ನಾವು ನಿರಾತಂಕವಾಗಿ ಕೋಟೆಯೊಳಗೆ ಹೊಕ್ಕು ಬಿಡೋಣ. ಅಲ್ಲಿ ನಮಗೆ ಮೋಸದ ಮರ್ಕಟ ಪುಂಡನು ಸಿಕ್ಕದೆ ಹೋಗಲಾರ." ಎಂದು ಹೇಳಿದನು. ಅವನು ಕಾಳೀವರ್ಮನ ಉತ್ತರವನ್ನೂ ಲಕ್ಷ್ಯ ಮಾಡದೆ, ಉರಿಯುವ ಕೋಟೆಯ ಬಾಗಿಲ ಹತ್ತಿರ ಬೆಂಕಿಕೊಳ್ಳಿಯೊಂದಿಗೆ ಓಡಾಡುತ್ತಿರುವ ಆಟವಿಕನನ್ನು ನೋಡಿ, "ಲೋ! ಆಟವಿಕ ಸೇವಕಾ! ಬೆಂಕಿಯನ್ನು ಆ ಚೀಚೆ ಸರಿಸಿ ದಾರಿ ಸರಿಮಾಡು. ಬೇಗ ಬಂದು ನನ್ನ ಆನೆಯನ್ನು ಕೋಟೆಯೊಳಗೆ ನಡೆಸು. ಬಾ ಬಾ! ಚುರುಕಾಗು!" ಎಂದನು.

ಅವನ ಕೂಗು ಕೇಳಿ ಆಟವಿಕನು ಓಡೋಡಿ ಬಂದು ಉರಿಯುವ ಕಟ್ಟಿಗೆಯನ್ನು ದೂರ ಬಿಸುಟು, ಕಳ್ಳನಾಗಮಲ್ಲನೊಂದಿಗೆ, ವಿಜಯದ ಸನ್ನೆ ಮಾಡಿ, "ಬಂದೆ ಬಂದೆ, ಭಲ್ಲೂಕ ದೊರೆಗಳೇ! ಇದೋ



ದಾರಿ ಸರಿಯಾಯಿತು" ಎಂದು ಕೂಗಿ ಆನೆಯ ಕಡೆಗೆ ಸಾಗಿದನು. ಆಗ ನಾಗಮಲ್ಲನು "ನಿಲ್ಲೋ ನನ್ನ ಸಂಗಡಿಗಾ!" ಎಂದು ಅವನನ್ನು ತಡೆದು, "ಈಗ ಇಲ್ಲಿ ನನಗೂ ನನ್ನ ಕಡೆಯವರಿಗೂ ಕೆಲಸವೇನಿದೆ? ಇಲ್ಲಿ ನಡೆಯುವುದೆಲ್ಲಾ ಮಾಂತ್ರಿಕರ ನಡುವಿನ ತಗಾದೆ ಯಾಗಿದೆ. ನಮಗೇನೂ ಸಂಬಂಧವಿಲ್ಲ. ಅವರಾಯಿತು, ಅವರ ಗೊಡವೆಯಾಯಿತು. ನಮ್ಮ ಪಾಡಿಗೆ ನಾವು ಕಾಡಿಗೆ ಹೋಗಿ, ನಮ್ಮ ವೃತ್ತಿ ನಾವು ಏನೋ ನೋಡಿಕೊಳ್ಳೋಣ" ಎಂದನು.

ಕೋಟೆಯ ಬಾಗಿಲ ಬಳಿಗೆ ಹೋಗುತ್ತಿದ್ದ ಕಾಳೀ ವರ್ಮನು ಆ ಮಾತನ್ನು ಕೇಳಿ, ಕೋಪದಿಂದ ನಾಗ ವರ್ಮನ ಕಡೆಗೆ ಕತ್ತಿ ನೆಗಹಿ, "ಎಲೋ ಕಾಡು ಕಳ್ಳ ಕೊರಮಾ! ಕಟ್ಟಕಡೆಗೆ ನಿನ್ನ ದಾರಿಹೊಡಕ ಬುದ್ಧಿ ಮೇಲೆದ್ದಿತೇನು? ಅಡಗಿ ಹೊಂಚಿ ನಿರಾಯುಧ ರಾದ ಪಾಪದ ಪ್ರಯಾಣಿಕರನ್ನು ಹಿಡಿದು ಕೊಳ್ಳೆ ಹೊಡೆಯುವುದರ ಹೊರತು, ಖಾಡಾಖಾಡಿಯಾಗಿ ಎದುರಿಸಿ ನಿಂತು ಶತ್ರುಗಳೊಂದಿಗೆ ಹೋರಾಡುವ ಧೈರ್ಯ ಸಾಹಸ ನಿನ್ನಂಥವನಿಗೆ ಎಲ್ಲಿಯದು? ನಾಚಿಕೆಗೇಡಿಯೇ! ಸುಡಲಿ ನಿನ್ನ ಪ್ರತಾಪ!" ಎಂದನು ತಿರಸ್ಕಾರದಿಂದ.

ಕಳ್ಳ ನಾಗಮಲ್ಲನು ಎಲ್ಲರ ಕಡೆಗೂ ಹೀಯಾ ಳಿಕೆಯ ದೃಷ್ಟಿಯನ್ನು ಬೀರಿ, "ಶತ್ರುಮಿತ್ರ ಮುಂತಾ ದ್ದೆಲ್ಲಾ ನಿಮ್ಮಂಥವರಿಗೆ, ನನ್ನಂಥವನಿಗಲ್ಲ. ನನಗೆ ಶತ್ರುವೂ ಮಿತ್ರನೂ ಎಲ್ಲಾ ಒಂದೇ. ಬದುಕು ನಡೆ ಸಲು ಬೇಕಾದ ಒಂದಿಷ್ಟು ಧನವು ಯಾರ ಹತ್ತಿರ ಇದೆಯೋ ಅವರನ್ನು ದೋಚಿಕೊಳ್ಳುತ್ತೇನೆ. ಈಗ ಕೋಟೆಯೊಳಗೆ ದುರ್ಮುಖ ರಾಜನು ಗೆದ್ದರೂ, ಅವನ ಸಾಮಂತ ಸೂರ್ಯಭೂಪತಿ ಗೆದ್ದರೂ ನನಗೆ ಸಿಗುವ ಲಾಭ ಅಷ್ಟರಲ್ಲೇ ಇದೆ. ಸುಮ್ಮನೆ ನಾವೇಕೆ ನಡುವೆ?" ಎಂದನು.

ನಾಗಮಲ್ಲನು ತಮ್ಮ ಪಕ್ಷದಲ್ಲಿರಬೇಕಾದರೆ ಸಂಬಳದ ಹಣ ಸಿಗಬೇಕೆಂಬುದಕ್ಕಾಗಿ ಹೀಗೆ ಡೊಂಕು ಮಾತು ಹೇಳುವನೆಂದು ಕರಡಿಕೆಂಗಣ್ಣ ಮಾಂತ್ರಿಕನಿಗೆ ಗೊತ್ತಾಯಿತು. ಅವನು ತನ್ನ ಕತ್ತಿಯಿಂದ ನಾಗ ಮಲ್ಲನ ಬೆನ್ನನ್ನು ತಟ್ಟಿ, "ಎಲೋ ನಾಗಮಲ್ಲಾ! ಇದು ಅಷ್ಟೇನೂ ಮಂತ್ರಶಕ್ತಿಯ ಪ್ರಭಾವವಿಲ್ಲದ ಕತ್ತಿಯಾಯಿತು. ಇದೀಗ ಆ ಕಳೆದು ಹೋದ ನನ್ನ ಮಂತ್ರದಂಡವಾಗಿರುತ್ತಿದ್ದರೆ ನಿನ್ನನ್ನು ಈ ಕ್ಷಣದಲ್ಲಿ ಗುಳ್ಳೇ ನರಿಯಾಗಿ ಮಾರ್ಪಡಿಸಿ ಬಿಲದೊಳಗೆ ಓಡಿ ಸುತ್ತಿದ್ದೆ. ನನ್ನ ಮಾತು ಕೇಳು. ಈಗ ದುರ್ಮುಖ ರಾಜನ ಹೊರತು ಬೇರೆ ಯಾರು ಗೆದ್ದರೂ ನಿನ್ನನ್ನು ಅರಣ್ಯದ ಕ್ರೂರ ಮೃಗದ ಹಾಗೆ ಬೇಟೆಯಾಡಿಬಿಡು ತ್ತಾರೆಂದು ತಿಳಿ. ಸದ್ಯ ನೀನು ಜಾರಿಕೊಂಡರೂ ಬಿಡುವವರಲ್ಲ. ಯೋಚನೆ ಇದ್ದರೆ ನಿನಗೇ ತಿಳಿಯು ತ್ತದೆ!" ಎಂದು ಎಚ್ಚರಿಕೆ ಕೊಟ್ಟನು.

ಈ ಮಾತು ಕೇಳಿದ ಕೂಡಲೇ ನಾಗಮಲ್ಲನ ಮನಸ್ಸು ತಿರುಗಿತು. ಅವನಿಗೆ ತಾನು ದುರ್ಮುಖ

ರಾಜನ ಪಕ್ಷದಲ್ಲಿರುವುದೇ ಒಳ್ಳೆಯದೆನಿಸಿತು. ಇದರಿಂದ ತನ್ನ ಬೆಂಬಲವಾಗಿ ಮಾಂತ್ರಿಕರಂಥವರೂ, ರಾಕ್ಷಸನೂ ಇರುತ್ತಾರೆ. ಆದುದರಿಂದ ಈ ಯುದ್ಧದಲ್ಲಿ ದುರ್ಮುಖ ರಾಜನೇ ಗೆದ್ದು ಉದಯಗಿರಿ ರಾಜ್ಯಕ್ಕೆ ರಾಜನಾದಾನು. ಆಗ ಅವನ ಪಕ್ಷದಲ್ಲಿದ್ದ ತನಗೂ ಒಳ್ಳೆಯದಾದೀತು.

ಹೀಗೆಂದುಕೊಂಡು ನಾಗಮಲ್ಲನು ತನ್ನ ಇಬ್ಬರು ಅನುಚರರನ್ನು ನೋಡಿ, "ಏನ್ರೋ! ನನ್ನ ಮಾತು ಕೇಳಿ. ಇವತ್ತಿಗೆ ನಮಗೆ ಕಾಡು ಕಾಡು ಅಲೆದಾಡುವ ಕಾಟ ತಪ್ಪಿತು. ನಾವು ದುರ್ಮುಖ ರಾಜನ ಪಕ್ಷ ಸೇರಿ ಶತ್ರು ಸಂಹಾರ ಮಾಡಿದೆವೆಂದರೆ ಆ ರಾಜನು ನಮಗೆ ಸೈನ್ಯದಲ್ಲಿ ದೊಡ್ಡ ಸಂಬಳದ ಮೇಲೆ ಪದವಿಗಳನ್ನು ಕೊಡದಿರಲಾರ ಅದೇ ನಮಗೆ ಒಳ್ಳೆಯದಲ್ಲವೆ? ಏನನ್ನುವಿರಿ?" ಎಂದನು.

ತಮ್ಮ ನಾಯಕ ಹೀಗೆ ಹೇಳಿದ ಕೂಡಲೇ ಕಳ್ಳರಿಬ್ಬರೂ ತಮ್ಮ ಕತ್ತಿಗಳನ್ನು ಎತ್ತಿ ನಡುಗಿಸುತ್ತ, "ಹೌದು ಹೌದು! ಅದೇ ಒಳ್ಳೆಯದು. ದುರ್ಮುಖ ಮಹಾರಾಜರಿಗೆ ಜೈ!" ಎಂದು ಗಟ್ಟಿಯಾಗಿ ಕೂಗಿ, ಉರಿಯುತ್ತಿರುವ ಕೋಟೆಯ ದ್ವಾರದ ಮುಂದೆ ಬಿದ್ದಿದ್ದ ಕರಿಕೆಂಡಗಳನ್ನು ಕತ್ತಿಯಿಂದ ಆಚೀಚೆ ಸರಿಸುತ್ತ ದಾರಿ ಮಾಡತೊಡಗಿದರು.

ಕರಡಿಕೆಂಗಣ್ಣನೂ ಕಾಳೀವರ್ಮನೂ ತಮ್ಮ ವಾಹನಗಳನ್ನೇರಿಕೊಂಡರು. ಕಾಳೀವರ್ಮನು ಕರಡಿಯವನನ್ನು ನೋಡಿ, "ನಾವೀಗ ಎಲ್ಲಾ ಸೇರಿ ಹತ್ತು ಮಂದಿಗಳಷ್ಟೇ ಇದ್ದೇವೆ. ಮುಖ್ಯವಾಗಿ ನಾವು ಮಾಡಬೇಕಾದುದು ಮಾಯಾಮರ್ಕಟ ರೂಪದಲ್ಲಿರುವವನಿಂದ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ಎಳೆದುಕೊಳ್ಳಬೇಕು. ತರುವಾಯ ದುರ್ಮುಖ ರಾಜನ ಪ್ರಾಣವನ್ನು ಕಾಪಾಡುವುದು. ಈ ಕಾರ್ಯಗಳಿಗಾಗಿ ನಿಮ್ಮಲ್ಲಿ ಪ್ರತಿಯೊಬ್ಬರೂ ಜೀವದ ಹಂಗು ದೊರೆದು ಸಾಹಸ ಮಾಡಬೇಕಾಗುತ್ತದೆ. ಮಾಡುವಿರಾ?" ಎಂದು ಕೇಳಲು, ಎಲ್ಲರೂ ಆಯುಧಗಳನ್ನೆತ್ತಿ ಕುಣಿಸುತ್ತ "ಕಾಳೀವರ್ಮರಿಗೆ ಜೈ! ಕರಡಿಕೆಂಗಣ್ಣ ಮಹಾಮಾಂತ್ರಿಕರಿಗೆ ಜೈ!" ಎಂದು ಘೋಷಿಸಿದರು.



ಕಾಳೀವರ್ಮನು ಕುದುರೆಯ ಮೇಲೆ ಮುಂದಕ್ಕೆ ಕೋಟೆಯ ದ್ವಾರದ ಕಡೆಗೆ ಸಾಗುತ್ತ, ಏನೋ ನೆನಪಿಗೆ ಬಂದು ತಟ್ಟನೆ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, "ಆ ಉಗ್ರದಂಡನೆಂಬ ರಾಕ್ಷಸನು ಎಲ್ಲಿ? ಇಲ್ಲೆಲ್ಲಿಯೂ ಕಾಣುವುದಿಲ್ಲವಲ್ಲಾ? ಎತ್ತಹೋದ?" ಎಂದು ಕೇಳಿದನು.

ಆಗ ತಾನೇ ಎಲ್ಲರ ಲಕ್ಷ್ಯ ಉಗ್ರದಂಡನ ಕಡೆಗೆ ಹೋಯಿತು. ಉಗ್ರದಂಡನು ಒಂದು ಆನೆಯ ಸೊಂಡಿಲನ್ನು ಹಿಡಿದುಕೊಂಡು ದೂರದಲ್ಲಿ ನಿಂತಿದ್ದ ಜಿತಕೇತುರಾಜನ ಮಂತ್ರಿ ಜೀವಗುಪ್ತನ ಗುಂಪಿನ ಕಡೆಗೆ ಹೋಗುವುದನ್ನು ನೋಡಿದರು.

ಆದನ್ನು ನೋಡಿ ಕಾಳೀವರ್ಮನು ಆಶ್ಚರ್ಯಪಡುತ್ತ, ಕರಡಿಕೆಂಗಣ್ಣನೊಂದಿಗೆ "ಗುರುಗಳೇ



ರಾಕ್ಷಸನ ರೀತಿ ನೋಡಿದರೆ ನನಗೇನೋ ಸಂದೇಹ ವಾಗಿದೆ. ನಮ್ಮ ಶತ್ರುವಾದ ಜಿತಕೇತುವಿನ ಪಕ್ಷಕ್ಕೆ ಸೇರಲು ಹೋಗುವ ಹಾಗಿದೆ." ಎಂದನು.

"ಹಾಗೆ ಒಮ್ಮೆಗೇ ಅಪಾರ್ಥ ಕಲ್ಪಿಸಬಾರದು. ಆತನಿಗೆ ನನ್ನ ಹತ್ತಿರ ಏನೋ ಕೆಲಸವಿರುವುದಾಗಿ ಗೊತ್ತಾಗಿದೆ. ಯಾವುದಕ್ಕೂ ಬೇಗನೇ ಹೋಗಿ ಅವನ ಅಂತರ್ಯವೇನೆಂಬುದನ್ನು ತಿಳಿದುಕೋ." ಎಂದನು ಕರಡಿಕೆಂಗಣ್ಣ.

ಈ ಸಂಭಾಷಣೆಗಳು ಕಟುಕಕರಡಿಯವನ ಕಿವಿಗೂ ಬಿದ್ದುವು. ಅವನು ಸಂದೇಹದಿಂದ ದುರ್ಮುಖನ ಅಂಗರಕ್ಷಕರನ್ನು ನೋಡಿ, "ಒಹೋಯ್, ಅಂಗ ರಕ್ಷಕ ಭಟರೇ ! ಆ ರಾಕ್ಷಸನು ನಮ್ಮ ಕಾಳೀವರ್ಮ ದೊರೆಗಳ ಮೇಲೆ ತಿರುಗಿ ಬೀಳುವ ಹಾಗಿದೆ. ಯಾವುದಕ್ಕೂ ಒಳ್ಳೆಯದು, ನಾವು ಅವರ ಬೆನ್ನು ಕಾಯುತ್ತ ಹೋಗೋಣ. ನಿಮ್ಮ ಆನೆಗಳನ್ನು ಅತ್ತ ತಿರುಗಿಸಿರಿ. ಆಯುಧಗಳನ್ನು ತಯಾರಾಗಿಟ್ಟುಕೊಳ್ಳಿ. ಎಲೋ ಆಟವಿಕನೇ, ನೀನೂ ನಮ್ಮೊಂದಿಗೆ ಬಾ. ನಿನ್ನ ಬಿಲ್ಲು ಬಾಣಗಳನ್ನು ತಯಾರಾಗಿಟ್ಟುಕೋ !" ಎಂದು ಆಜ್ಞೆ ಮಾಡಿ ತನ್ನ ಆನೆಯನ್ನು ಕಾಳೀವರ್ಮನ ಹಿಂದೆಯೇ ನಡೆಯಿಸಿದನು.

ಕುದುರೆಯ ಮೇಲೆ ಕಾಳೀವರ್ಮನೂ, ಆನೆಗಳ ಮೇಲೆ ಕಟುಕಕರಡಿಯವನೂ, ಅಂಗರಕ್ಷಕರೂ ಗುಂಪಾಗಿ ತನ್ನ ಕಡೆಗೆ ಬರುವುದನ್ನು ನೋಡಿ ಉಗ್ರ ದಂಡ ರಾಕ್ಷಸನಿಗೆ ಸ್ವಲ್ಪ ಆಶ್ಚರ್ಯವಾಯಿತು. ಏನೋ ಸಂದೇಹವೂ ಎದ್ದು, ತನ್ನ ಕಲ್ಲಿನ ಗದೆಯನ್ನು ಬಲಗೈಯಲ್ಲಿ ಎತ್ತಿ ಹಿಡಿದುಕೊಂಡು ಆನೆಯ ಸೊಂಡಿಲನ್ನು ಎಳೆದು ನಿಲ್ಲಿಸಿ, ಈ ಕಡೆಗೆ ತಿರುಗಿ ಎದೆಯುಬ್ಬಿಸಿ ನಿಂತನು.

ಕಾಳೀವರ್ಮನು ಅವನ ಸಮೀಪಕ್ಕೆ ಹೋಗಿ, "ಇದೇನು ಉಗ್ರದಂಡಾ, ನಮ್ಮೊಂದಿಗೆ ಕೋಟೆಯೊಳಗೆ ಬಂದು, ಸಾಮಂತ ಸೂರ್ಯ ಭೂಪತಿಯಿಂದ ದುರ್ಮುಖರಾಜನನ್ನು ಕಾಪಾಡುವ ಕೆಲಸ ಬಿಟ್ಟು ಹೀಗೆ ನಿನ್ನ ಪಾಡಿಗೆ ಹಿಂದಿರುಗುವುದೆಲ್ಲಿಗೆ ? ನಮ್ಮೊಂದಿಗೆ ಹೇಳಲಿಲ್ಲವಲ್ಲಾ ? ಏನಾಯಿತು ?" ಎಂದು ಕೇಳಿದನು.

"ಕಾಳೀವರ್ಮಾ, ದುರ್ಭಾಗ್ಯದವನಾದ ಆ ದುರ್ಮುಖರಾಜನು ಇನ್ನೂ ಬದುಕಿರುವನೆಂದು ನಂಬುವಿಯೇನು ? " ಎಂದು ಉಗ್ರದಂಡನು ತಿರುಗಿ ಕೇಳಿ ಒಂದು ವಿಧವಾಗಿ ನಕ್ಕನು.

"ಅವನು ಬದುಕಿಲ್ಲವೆಂಬ ಅನುಮಾನ ನಿನಗೇಕೆ ಬಂತು ? ಕೋಟೆಯೊಳಗೆ ದುರ್ಮುಖನ ಪಕ್ಷದ ಸೈನಿಕರೂ ಇದ್ದಾರೆಂದು ನಿನಗೆ ಗೊತ್ತಾಗಲಿಲ್ಲವೆ ? ಹಾಗಿಲ್ಲದಿದ್ದರೆ ಕೋಟೆಯೊಳಗೆ ನಡೆಯುವ ಯುದ್ಧವು ಯಾರು ಯಾರೊಳಗೆ ನಡೆಯುವುದೆನ್ನುವಿ ? " ಎಂದನು ಕಾಳೀವರ್ಮ.

ಉಗ್ರದಂಡ ರಾಕ್ಷಸನು ದೂರದಲ್ಲಿರುವ ಮಂತ್ರಿ ಜೀವಗುಪ್ತನ ಸೈನಿಕರ ಕಡೆಗೆ ಕೈ ತೋರಿಸುತ್ತ,

"ಅಲ್ಲಿ ಅವರು ಹೇಗೆ ಕಾದಿದ್ದಾರೆ ನೋಡಯ್ಯ ! ಕಾಳೀವರ್ಮಾ, ನೀವೆಲ್ಲಾ ಕೋಟೆಯ ದ್ವಾರದ ಹತ್ತಿರ ಹಾಳು ಹರಟೆ ಹರಟುತ್ತ ಕಾಲಯಾಪನೆ ಮಾಡಿದಿರಿ. ಒಳಗೆ ಏನು ನಡೆದರೂ ನಡೆದೀತು. ಈಗಲಾದರೂ ಮಿಂಚಿ ಹೋದುದೇನಿಲ್ಲ. ಬೇಗನೇ ಕೋಟೆಯೊಳಗೆ ಹೊಕ್ಕು ದುರ್ಮುಖರಾಜನನ್ನು ರಕ್ಷಿಸಿದರೆ ಒಳ್ಳೆಯದೇ. ಆ ಮಾಯಾ ಮರ್ಕಟದ ಕೈಯಲ್ಲಿರುವ ಮಂತ್ರದಂಡವನ್ನಾದರೂ ಕಿತ್ತುಕೊಳ್ಳಲಾಗುವುದೋ ನೋಡಿ." ಎಂದನು.

"ಆ ಕೆಲಸ ಮಾಡಲಿಕ್ಕೇ ಸಿದ್ಧರಾಗುತಿದ್ದೇವೆ. ನೀನು ಈ ಆನೆಯೊಂದಿಗೆ ಅದೆತ್ತಲೋ ಹೊರಟೆಯಲ್ಲ ? ಎಲ್ಲಿಗೆಂದು ಹೇಳಲಾರೆಯ ?" ಎಂದು ಕೇಳಿದ ಕಾಳೀವರ್ಮ.

ಉಗ್ರದಂಡ ರಾಕ್ಷಸನು ಕಲ್ಲಿನಗದೆಯನ್ನು ಜೀವಗುಪ್ತನ ಗುಂಪಿನ ಕಡೆಗೆ ಓಲಾಡಿಸುತ್ತ, "ಆ ಮಂತ್ರಿಯೂ, ಅವನೊಂದಿಗಿರುವ ಸೈನಿಕರೂ, ಕೋಟೆಯೊಳಗೆ ನಿಮ್ಮನ್ನು ಬೆಂಬತ್ತಿ ಹತ ಮಾಡದಂತೆ ಅವರನ್ನು ಅಡ್ಡಗಟ್ಟಲು ಹೋಗುತ್ತೇನೆ. ಗೊತ್ತಾಯಿತೇ ? ನೀವು ನನ್ನನ್ನು ವ್ಯತ್ಯಾಸವಾಗಿ ತಿಳಿದುಬಿಟ್ಟಿರಿ ಪಾಪ !" ಎಂದು ನಕ್ಕನು.

ಆ ಮಾತು ಕೇಳಿ ಕಾಳೀವರ್ಮನಿಗೆ ಸಮಾಧಾನವಾಯಿತು. ಅವನು ಕಟುಕಕರಡಿ ಮೊಲಾದವರ ಕಡೆಗೆ ತಿರುಗಿ, "ಹೋಗಿರಿ ! ಕೋಟೆಯೊಳಗೆ ನುಗ್ಗಿರಿ !" ಎನ್ನುತ್ತ ತನ್ನ ಕುದುರೆಯನ್ನು ಕೋಟೆ ದ್ವಾರದ ಕಡೆಗೆ ಓಡಿಸಿದನು.

ಎಲ್ಲರೂಭೀಕರವಾಗಿ ಗರ್ಜಿಸುತ್ತ, ಕೂಗಾಡುತ್ತ ಕೋಟೆಯೊಳಗೆ ಹೊಕ್ಕರು. ಎರಡು ಆನೆಗಳ ಮೇಲೆ ಕತ್ತಿಗಳನ್ನೂ, ಕೊಡಲಿಯನ್ನೂ ಹಿಡಿದವರನ್ನು ನೋಡಿ, ಕೋಣದ ಮೇಲೆ ಕರಡಿಕೆಂಗಣ್ಣ ಮಾಂತ್ರಿಕನೂ, ಅವರ ಹಿಂದೆ ವೀರತಾಂಡವ ಮಾಡುತ್ತ ಬರುವ ಕಳ್ಳ ನಾಗಮಲ್ಲ ಮೊದಲಾದವರನ್ನೂ



ನೋಡಿ, ಅದುವರೆಗೆ ಸಾಮಂತರಾಜನ ಪಕ್ಷದಲ್ಲಿ ದುರ್ಮುಖರಾಜನ ಸೈನಿಕರೊಂದಿಗೆ ಹೋರಾಡುತ್ತಿದ್ದವರು ಭಯ ಕಂಪಿತರಾಗಿ, "ಅಯ್ಯಾ ! ಸೂರ್ಯಭೂಪತಿ ಮಹಾರಾಜರೇ ! ಕರಡೀಕೆಂಗಣ್ಣ ಮಾಂತ್ರಿಕನಂತೆ ! ಆನೆಗಳ ಮಂದೆಯೊಂದಿಗೆ ಬರುತ್ತಿದ್ದಾನೆ ! ಬೇಗನೇ ನಾವು ಓಡಿ ಹೋಗುವುದೇ ಕ್ಷೇಮ ! ಎಲ್ಲದಕ್ಕೂ ಮೊದಲು ಜೀವ ಉಳಿದರೆ. ಮುಂದೇನಾದರೂ ಮಾಡಬಹುದು." ಎಂದು ಪುಕ್ಕಲು ಕೂಗನ್ನೆಬ್ಬಿಸಿದರು.

ಆ ಕೂಗನ್ನು ಕೇಳಿ ಚಿಕ್ಕದೊಂದು ಕಟ್ಟಡದ ಹಿಂದಿನಿಂದ ಸಾಮಂತ ಸೂರ್ಯಭೂಪತಿ ಕುದುರೆಯ ಮೇಲೆ, ನೆತ್ತರಲ್ಲಿ ನೆನೆದ ಕತ್ತಿಯೊಂದಿಗೆ ಮುಂದಕ್ಕೆ ಬಂದು, "ನೀವಾರೂ ಯಾವುದಕ್ಕೂ ಹೆದರಬೇಕಾಗಿಲ್ಲ, ದುರ್ಮುಖನ ಪಕ್ಷ ಸೇರಿದವರೆಲ್ಲರನ್ನೂ ಹತ ಮಾಡಿಯಾದ ಹಾಗೇ ಆಯಿತು. ಈ ಕರಡೀಕೆಂಗಣ್ಣನೊಬ್ಬ ನಮ್ಮನೇನು ಮಾಡಬಲ್ಲನು ? ಅವನೀಗ



ಹಲ್ಲು ಮುರಿದ ಮೃಗ! ಮರ್ಕಟ ರೂಪದಲ್ಲಿ ನಮ್ಮ ಪಕ್ಷದಲ್ಲಿರುವವನು ಈ ಕೆಂಗಣ್ಣ ಮಾಂತ್ರಿಕನನ್ನು ಮಿಂಚಿದ ಮಂತ್ರ ಶಕ್ತಿಗಳುಳ್ಳವನುಗೊತ್ತಾ? ಹೆದರಬೇಡಿರಿ. ಧೈರ್ಯದಿಂದ ಹೋರಾಡಿರಿ!" ಎಂದು ಕೂಗಿ ಹೇಳಿದನು.

ಆ ಸಾಮಂತರಾಜನನ್ನು ನೋಡಿದ ಕೂಡಲೇ ಕಾಳೀವರ್ಮನು ಕರಕರನೆ ಹಲ್ಲು ಕಡಿದು, "ಎಲೋ! ಹುಲು ಸಾಮಂತಾ? ಕೋತಿಯ ಸಹಾಯದಿಂದ ಯುದ್ಧದಲ್ಲಿ ಗೆಲ್ಲುವೆನೆಂದುಕೊಂಡೆಯಾ? ನೀನು ದೊಡ್ಡ ರಾಮನಂಥವನೇನು? ಎಲೋ ವಂಚಕನೇ! ದುರ್ಮುಖಿ ರಾಜನನ್ನು ಏನು ಮಾಡಿದೆ? ಅವನ ಕೈಯಿಂದಲೇ ನಿನ್ನ ತಲೆ ಕಡಿಸಲು ಬಂದಿದ್ದೇನೆ! ತಪ್ಪಿದರೆ ಈಗಲೇ ನಿನ್ನ ತಲೆ ನೆಲಕ್ಕುರುಳುತ್ತದೆ" ಎಂದನು.

ಅಷ್ಟರಲ್ಲಿ ಕಟ್ಟಡದ ಗೋಡೆಯ ಮೇಲೆ ಮಾಯಾ ಮರ್ಕಟವು ಚಂಗನೆ ಹಾರಿ ಕಿಚಕಿಚವೆಂದು ಅರಚಿತು. ಎಲ್ಲರೂ ಅದರ ಕಡೆಗೆ ತಲೆಯೆತ್ತಿ ನೋಡಿದರು. ಮರ್ಕಟವು ಬಲಗೈಯಲ್ಲಿ ಮಂತ್ರದಂಡವನ್ನು ಹಿಡಿದು ಕೊಂಡಿತ್ತು. ಎಡದಕೈಯಲ್ಲಿ ಒಂದು ತಲೆಯನ್ನು ಜುಟ್ಟು ಹಿಡಿದು ಓಲಾಡಿಸುತ್ತಾ, "ಎಲೋ, ಕಾಳೀವರ್ಮಾ! ದುರ್ಮುಖರಾಜನು ಎಲ್ಲಿರುವನೆಂದಲ್ಲವೇ ಕೇಳಿದೆ? ಇಕೋ ಅವನ ತಲೆ! ಮುಂಡ ಎಲ್ಲಿದೆಯೋ ನೀನೇ ಹುಡುಕಿ ಕಂಡು ಹಿಡಿ! ಅಷ್ಟರೊಳಗೆ ನಿನ್ನ ತಲೆ ಸೂರ್ಯಭೂಪತಿಯ ಕತ್ತಿಗೆ ಬಲಿಯಾದರೆ, ಪಾಪ! ಮತ್ತೆ ಯಾರು ಹುಡುಕುತ್ತಾರೋ! ನೋಡೋ ಸಾಯಲಿಕ್ಕಿಬಂದವನೇ!" ಎಂದು ಕಿಚಕಿಚನೆ ನಕ್ಕಿತು.

ಮರ್ಕಟನನ್ನು ನೋಡಿ, ಕರಡಿಕೆಂಗಣ್ಣ ಮಾಂತ್ರಿಕನು, ಕತ್ತಿ ಹಿರಿದು ತನ್ನ ಕೋಣವನ್ನು ಮುಂದಕ್ಕೆ ನಡೆಸುತ್ತ, "ಎಲೋ! ಮರ್ಕಟ ರೂಪದಲ್ಲಿರುವ ದುಷ್ಟನೇ! ನನ್ನ ಮಂತ್ರದಂಡವನ್ನು ಕದ್ದುಕೊಂಡು ಗೆದ್ದೆನೆಂದು ಹಾರಬೇಡ! ಕಳ್ಳಾ! ಭ್ರಾಂತಿಮತೀ! ನನ್ನ ಈ ಖಡ್ಗವು ಆ ಮಂತ್ರ ದಂಡಕ್ಕೇನೂ ಕಡಿಮೆಯದಲ್ಲ. ನಿನ್ನ ಗುರು ತಾಂತ್ರಿಕ ಮಿಥ್ಯಾ ಮಿಶ್ರನು ಕೂಡಾ, ಆ ಬ್ರಹ್ಮಪುತ್ರಾ ನದಿಯ ಪ್ರಾಂತ ಬಿಟ್ಟು ಈ ಅರಣ್ಯ ಪ್ರದೇಶಕ್ಕೆ ಬಂದನೇನು? ಅವನ ಬೆಂಬಲದಿಂದಲೇ ನೀನಿಷ್ಟೂ ಹಾರುವುದೇನು? ಬೊಗಳೋ ಇನ್ನಿಷ್ಟು!" ಎಂದನು.

ಮಾಯಾಮರ್ಕಟನು ಹುಬ್ಬು ಹಾರಿಸಿ ಅವಹೇಳನೆಯಿಂದ ನಕ್ಕು, "ಓಹೋ! ಭಲ್ಲೂಕ ರಕ್ತಲೋಚನಾ! ನಿನ್ನ ಮಂತ್ರ ಶಕ್ತಿ ಅಷ್ಟು ದೊಡ್ಡದಾದರೆ ನನ್ನ ಗುರುಗಳು ಎಲ್ಲಿದ್ದಾರೆಂದು ತಿಳಿದುಕೊಳ್ಳಲಾರೆಯೇನು? ಆ ಮಹಾನುಭಾವನು ನಿನ್ನ ಗುರುವಾದ ಭಲ್ಲೂಕ ಪಾದನ ತಲೆ ತರಿಯಲು ಮಂಜಿನ ಕಲ್ಲ ಮೇಲೆ ಕತ್ತಿ ಮಸೆಯುತ್ತಿದ್ದಾನು. ಹೋಗು, ಹುಡುಕಿಕೋ! ನನ್ನ ಬಾಯಿಯಿಂದ ನಿನಗೆ ಸಹಾಯದ ಮಾತು ಬರಲಾರದು" ಎಂದನು.

ಮರ್ಕಟನ ಮಾತು ಕೇಳಿ ಕರಡಿಕೆಂಗಣ್ಣನಿಗೆ ವಿಪರೀತ ಕೋಪ ಬಂದಿತು. ಕಟುವಾದ ಕೆಂಗಣ್ಣಿನಿಂದ ಮರ್ಕಟನನ್ನು ಸುಡುವಂತೆ ನೋಡಿ, "ಕಾಳೀವರ್ಮಾ! ಕಟುಕ ನರಭಲ್ಲೂಕಾ! ಈ ಕೋಟೆಯೊಳಗಿನಿಂದ ಸಾಮಂತನ ಪಕ್ಷದವನು ಒಬ್ಬನು ಸಹಾ ಜೀವದೊಂದಿಗೆ ಓಡಿ ಹೋಗದಂತೆ ದ್ವಾರದ ಹತ್ತಿರ ನೋಡಿಕೊಳ್ಳಿ. ಈ ಮಾಯಾಮರ್ಕಟನನ್ನೂ ಜೀವದೊಂದಿಗೆ ಹಿಡಿದು ಚಿತ್ರವಧೆ ಮಾಡಿ ಕೊಲ್ಲದೇ ಬಿಡಲಾರೆ! ಹೇಗೆ ತಪ್ಪಿಸಿ ಕೊಂಡು ಹೋಗುತ್ತಾನೋ ನೋಡುತ್ತೇನೆ" ಎಂದನು.

ಮಾಂತ್ರಿಕನ ಮಾತು ಮುಗಿಯುವಷ್ಟರೊಳಗೆ ಕಟುಕಕರಡಿಯುವನೊಂದಿಗೆ ಆನೆಯ ಮೇಲೆ ಕುಳಿತಿದ್ದ ಆಟವಿಕನ ಕೈಗಳಿಂದ ಗುರಿತಪ್ಪದ ಬಾಣವು ಸೊಯ್ಯನೆ ಹೋಗಿ ಮಾಯಾಮರ್ಕಟನ ತೋಳಿನ ಮೂಲಕ್ಕೆ ತಾಗಿತು. ಆ ಪೆಟ್ಟಿಗೆ ಆ ಕೈಯಲ್ಲಿ ಹಿಡಿದಿದ್ದ ತಲೆ ಜಾರಿ ಬೀಳುತ್ತಿರಲು, ಮಾಯಾಮರ್ಕಟನು ಕೆಟ್ಟ ದನಿಯಿಂದ ಚೀರಿದನು. ಇದಿರು ನೋಡದ ಆ ಬಾಣದ ಹೊಡೆತದಿಂದ ತೋಳಿನಲ್ಲಿ ರಕ್ತ ಸುರಿಯುತ್ತಿತ್ತು. ಅಷ್ಟೆತ್ತರದಿಂದ ಬಿದ್ದ ತಲೆಯನ್ನು ನೋಡಿದ ಕೂಡಲೇ, ದುರ್ಮುಖನ ಅಂಗರಕ್ಷಕರಿಬ್ಬರೂ ಆನೆಯ ಮೇಲಿನಿಂದ ಕೆಳಗೆ ಹಾರಿ ಓಡಿಹೋಗಿ ಆ ತಲೆಯನ್ನು ನೋಡಿ, "ಓಹ್! ಇದು ದುರ್ಮುಖ ಮಹಾರಾಜರ ತಲೆಯೇ ಅಲ್ಲ, ಆ ಮಾಯದ ಕೋತಿ ನಮ್ಮನ್ನು ಮೋಸ ಮಾಡಲು ನೋಡಿತು." ಎಂದರು. ಆ ಕೂಡಲೇ ಕಟುಕಕರಡಿಯುವನು ಭೈರವನಾಮ ಗರ್ಜನೆ ಮಾಡುತ್ತ, ಚಪಗೊಡಲಿಯನ್ನು ಮೇಲೆತ್ತಿ ಕುಣಿಸುತ್ತ, "ಎಲೋ ಆಟವಿಕ ಸೇವಕಾ! ಮಾಯಾ ಮರ್ಕಟವನ್ನು ಹೊಡೆದು ಅದ್ಭುತವಾದ ಕೆಲಸ ಮಾಡಿದೆ. ಮಹಾಬಿಲ್ಲುಗಾರ ನೀನು. ಇನ್ನು ಆ ದುರ್ಮುಖ ರಾಜನನ್ನು ಹುಡುಕಿ ಕಂಡು ಹಿಡಿಯಬೇಕು. ನನ್ನ ಚಪಗೊಡಲಿಗೆ ತಪ್ಪಿದವರನ್ನು ನಿನ್ನ



ಬಾಣಗಳಿಂದ ಹೊಡೆದುಕೊಲ್ಲು. ಅಪ್ಪಣೆ ಕೊಟ್ಟೆನು" ಎಂದು ಆನೆಯ ತಲೆಯ ಮೇಲೆ ಕೊಡಲಿಯ ಹಿಡಿಕೆಯಿಂದ ತಿವಿದನು.

ಆನೆ ಭಯಂಕರವಾಗಿ ಘೀಂಕರಿಸುತ್ತ, ಬೇಗ ಬೇಗ ನಡೆಯಿತು. ಅಷ್ಟರೊಳಗೆ ಮಾಯಾಮರ್ಕಟವು ಗೋಡೆಯ ಮೇಲಿನಿಂದ ಕಾಣದೇ ಹೋದುದರಿಂದ ಕಾಳೀವರ್ಮನು ಕರಡಿಕೆಂಗಣ್ಣನೊಂದಿಗೆ, "ಮೊದಲು ನಾವು ಸಾಮಂತ ರಾಜನನ್ನೂ ಅವನ ಸೈನಿಕರನ್ನೂ ಹೊಡೆದುರುಳಿಸಬೇಕು. ದುರ್ಮುಖ ರಾಜನು ಈ ಕೋಟೆಯೊಳಗೆ ಯಾವುದೋ ಮೂಲೆಯಲ್ಲಿ ಬದುಕಿ ಕೊಂಡಿದ್ದಾನೆಂದೇ ನನಗೆ ಕಾಣುತ್ತದೆ. ಮೂಲೆ ಮೂಡುಕು ಬಿಡದೆ ಸರಿಯಾಗಿ ಹುಡುಕಿರಿ" ಎಂದನು.

ಕೂಡಲೇ ಕರಡಿಕೆಂಗಣ್ಣ ಮಾಂತ್ರಿಕನು, "ಭಲ್ಲೂಕ ಪಾದಗುರೋ!" ಎಂದು ಗರ್ಜಿಸಿ ಕತ್ತಿಯನ್ನೆತ್ತಿ, "ಎಲೋ, ಕೇಳಿರಿ! ದುರ್ಮುಖ ರಾಜನ ಪಕ್ಷದವರೆಲ್ಲಾ ನಮ್ಮ ಹಿಂದೆ ಬನ್ನಿ. ಎದುರು ತಿರುಗಿದವರು

ನನ್ನ ಕತ್ತಿಗೆ ಬಲಿಯಾಗಿರಿ! ತಪ್ಪಿದವರು ಚಿತ್ರಹಿಂಸೆಗೆ ಬಲಿಯಾಗುವಿರಿ. ಜಾಗ್ರತೆ!" ಎಂದು ನಾಲ್ಕು ಸುತ್ತಲೂ ಕೇಳುವಂತೆ ಕೂಗಿದನು.

ಅದುವರೆಗೂ ಸಾಮಂತನ ಸೈನಿಕರ ಧಾವತಿಗೆ ತಾಳಿಕೊಳ್ಳಲಾಗದೆ ಕೋಟೆಯೊಳಗೆ ಅಲ್ಲಲ್ಲಿ ಅಡಗಿಕೊಂಡಿದ್ದ ದುರ್ಮುಖನ ಪಕ್ಷದ ಸೈನಿಕರು ಬೇಗ ಬೇಗನೆ ಮಾಂತ್ರಿಕನ ಬಳಿಗೆ ಓಡೋಡಿ ಬಂದು "ಅಯ್ಯಾ, ನಮ್ಮನ್ನು ರಕ್ಷಿಸಿರಿ. ನಿಜ ಸಂಗತಿ ಹೇಳುತ್ತೇವೆ, ನಮ್ಮ ದುರ್ಮುಖ ಮಹಾರಾಜರು ಶತ್ರುಗಳ ಕಾಟಕ್ಕೆ ಹೆದರಿ ಸಿಂಹಾಸನವಿರುವ ಸಭಾಮಂಟಪದಲ್ಲಿ ಅಡಗಿಕೊಂಡಿದ್ದಾರೆ" ಎಂದು ಹೇಳಿದರು.

"ಹಾಗಾದರೆ ಅಲ್ಲಿಗೆ ದಾರಿ ತೆಗೆಯಿರಿ. ಇನ್ನು ನಿಮಗೆ ಯಾವ ಭಯವೂ ಇಲ್ಲ. ದುರ್ಮುಖ ರಾಜನೂ ಹೆದರ ಬೇಕಾಗಿಲ್ಲ, ನಾವು ಅವನಮಿತ್ರರೇ. ಶತ್ರು ಸೈನಿಕರ ಸಂಗತಿಯನ್ನು ನಾವು ನೋಡಿಕೊಳ್ಳುತ್ತೇವೆ" ಎಂದನು ಕಾಳೀವರ್ಮ.

ದುರ್ಮುಖನ ಪಕ್ಷದವರು "ಹೀಗೆ ಬನ್ನಿ" ಎಂದು ಮುಂದೆ ಸಾಗಿದರು. ಕಾಳೀವರ್ಮನೂ, ಕರಡಿಕಂಗಣ್ಣನೂ ಸಭಾ ಮಂಟಪಕ್ಕೆ ಹೋಗುವ ದಾರಿಯಲ್ಲಿ ಒಬ್ಬ ಶತ್ರು ಪಕ್ಷದ ವ್ಯಕ್ತಿಯೂ ಕಾಣಲಿಲ್ಲ, ಅವರು ಕೋಟೆಯೊಳಗಿನ ಮತ್ತೊಂದು ಭಾಗ ಸೇರಿ ಮಂತ್ರಾಲೋಚನೆ ಮಾಡಿಕೊಂಡಿದ್ದರು. ಸಾಮಂತ ಸೂರ್ಯಭೂಪತಿ ಮಾಯಾಮರ್ಕಟನ ತೋಳನ್ನು ಪೂಸುತ್ತ, ಮುಂದೇನು ಮಾಡಬೇಕೆಂದು ಆಲೋಚಿಸುತ್ತಿದ್ದನು.

ಕಾಳೀವರ್ಮನೂ ಮಾಂತ್ರಿಕನೂ ಸಭಾಮಂಟಪವನ್ನು ಸಮೀಪಿಸುವಷ್ಟರಲ್ಲಿ ಕಟುಕಭಲ್ಲೂಕನ ಆನೆಯ ಮೇಲಿನ ಸವಾರಿಯೂ ಅಲ್ಲಿಗೆ ಬಂದಿತು. ಆಗ ಸಿಂಹಾಸನದ ಮಂಟಪದ ಬಾಗಿಲು ಥಕ್ಕನೆ ತೆರೆದುಕೊಂಡಿತು. ಆ ಮಂಟಪದಂತಹ ಸುಂದರ ಕೋಣೆಯ ನಡುವೆ ಸಿಂಹಾಸನದ ಮೇಲೆ ದುರ್ಮುಖ ರಾಜನು ಕುಳಿತುಕೊಂಡಿದ್ದನು. ಅವನು ಬಂದವರನ್ನು ನೋಡಿ ಗಾಬರಿಯಿಂದ ಹಾರಿ ಚಲಿಸಲಿಲ್ಲ. ಹೆದರಿ ಕೂಗಲೂ ಇಲ್ಲ. ಅವನನ್ನು ನೋಡಿ ಕಾಳೀವರ್ಮ ಮೊದಲಾದವರು ಆಶ್ಚರ್ಯಪಡುತ್ತಿರಲು, ದುರ್ಮುಖ ರಾಜನು ಕೈಯೆತ್ತಿ, "ಕರಡಿ ಮುಖದ ಕಟುಕಾ! ಸ್ವಲ್ಪ ಹೊತ್ತಾದರೂ ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕೆಂಬ ನನ್ನ ಆಸೆ ತೀರಿತು. ಈಗ ನೀನು ನಿರ್ವಿಘ್ನವಾಗಿ ನನ್ನ ತಲೆಯನ್ನು ಕಡಿ. ನಿನ್ನ ಗುರುವಿಗೆ ಕಾಣಿಕೆ ಕೊಡು!" ಎಂದನು. ಅದನ್ನು ಕೇಳಿ ಕಟುಕಕರಡಿಯವನು ಉತ್ಸಾಹದಿಂದ ಕೂಗಿ, ಆನೆಯ ಮೇಲಿನಿಂದ ಸಭಾಮಂಟಪಕ್ಕೆ ಹಾರಿ ಚಪಗೊಡಲಿಯನ್ನು ತಿರುಗಿಸಿದನು.

(ಇನ್ನೂ ಇದೆ)

